

 ಸೂರ್ಯಕಾಂತಿ 



ವಿದ್ವಾನ್ ಐ. ಮಾ. ಮುತ್ತಣ್ಣ,

ಪ್ರಥಮ ಮುದ್ರಣದ ಪ್ರಕಾಶಕರು:
ಕೊಡಗು ಪ್ರಗತಿಪರ ಸಾಹಿತ್ಯ ಸಂಘ, ಮಡಿಕೇರಿ.



1947.

## ಸಹೃದಯರಿಗೆ:—

ಕವನಗಳನ್ನು ಕಟ್ಟುವುದು ಕೆಲವರ ಹುಚ್ಚಾದರೂ ಅದರಲ್ಲಿ ಒಂದು ವಿಧದ ಸಾಕ್ಷಾತ್ಕಾರವಿದೆ. ಒಂದೇ ಹಾಡಿಗೆ ರಾಗಭೇದಗಳು ಹಲವು ಇರುವಂತೆ ಕವನಗಳ ಮೂದರಿಗಳಲ್ಲಿ ವೈವಿಧ್ಯವಿದೆ. ಈ ತೆರದ ಕವನಗಳು ಸ್ವತಂತ್ರ ಧಾಟಿಯಿಂದ ಬರೆಯಲ್ಪಟ್ಟಿದ್ದರೂ ಛಂದೋಬದ್ಧದೊಳಗೆ ಅಡಗದೆ ಇಲ್ಲ. ಕನ್ನಡ ಕವನಗಳ ಪರಿಸ್ಥಿತಿಯು ಇಂದು ಯಾವ ಮಹತ್ವದೊಳಗೆ ಕೂಡಿದೆಯೆಂದು ಹೇಳಲು ಅಸಾಧ್ಯ. ಅದರ ವಿಮರ್ಶಾ ಕಾರ್ಯವಾದರೋ ಇನ್ನೂ ಅಸಾಧ್ಯ.

ಕವಿಯು ತಾನು ಮನಸ್ಸಿಗೆ ತೋರಿದ ವಿಷಯದಲ್ಲಿ ತನ್ನ ಸ್ವಂತ ತಾಳವನ್ನು ತಟ್ಟಿಕೊಂಡು ಹಾಡಿ ಸಂತೋಷಪಟ್ಟುಕೊಳ್ಳುವ ವ್ಯಕ್ತಿ. ಕವಿಯ ಊಹನಾಬಲವು ಇತರರ ಜ್ಞಾನಬಲವನ್ನು ಮೀರಿಸಿರುವುದು. ಹೇಗಿದ್ದರೂ ಅವನ ಹೇಳಿಕೆಯಲ್ಲಿ ಒಂದು ಸತ್ಯವಿದೆ. ಯಾರಿಂದಲೂ ಸುಳ್ಳೆಂದು ಹೇಳಲಿಕ್ಕಾಗದ ಒಂದು ವಿಧದ ಸತ್ಯವಿದೆ. ಆದರೆ ಸೌಂದರ್ಯದಲ್ಲಿ ವಿವಿಧತೆಯನ್ನು ತೋರಬಹುದು. ಪ್ರಕೃತಿಯ ಸೌಂದರ್ಯವು ಹಲವರಿಗೆ ಹಲವು ರೀತಿಯ ಭಾವನೆಯನ್ನು ಕೊಡುವಂತೆ. ಭಾವ ವೇಗವು ಅಮರ ಗಂಗೆಯಂತೆ. ಅದಕ್ಕೆ ಅಂತ್ಯವಿಲ್ಲ ಸಾವೂ ಇಲ್ಲ. ಇಂದು ಕವಿಗಳು ಹಾಡುವ ವಿಷಯಗಳು ಭಾವಸ್ಫೂರ್ತಿಯಿಂದ ಕಳೆಗೊಂಡಿವೆ. ಆದರೂ ಕವಿಯು ಕವಿಯಂತೆ ತೋರಬೇಕು. ಮೋಡದಿಂದಾವೃತವಾದ ನಿಸ್ತೇಜವಾದ ರವಿಯಂತಲ್ಲ!

ಹಲವು ಕವಿಗಳ ಹಾಡುಗಳ ಆಧಾರದ ಮೇಲೆ ಹೇಳುವುದಿದ್ದರೆ ಕೆಲವರು ಒರಟರು, ಕೆಲವರು ವಿನೀತರು, ಇನ್ನು ಕೆಲವರು ಮಧ್ಯಮ ಸ್ವಭಾವದವರು. ಏಳು ಬಣ್ಣಗಳ ಅಂತಿಮ ನಿರ್ಧಾರವು ಸ್ವಚ್ಛವಾದ ಬಿಳುಪನ್ನು ತೋರಿಸಬೇಕೆಂದಿರುವಂತೆ ಹಲವು ಬಗೆಯ ಕವಿಗಳ ಕಡೇ

ಧ್ಯೇಯವೆಂದರೆ ಸಮಾಜ ಸಂಸ್ಕಾರ. ಕವಿಯು ಸಮಾಜ ಸೇವಕನು. ಸಮಾಜವನ್ನು ಬೈಯುವನು, ಮೂದಲಿಸುವನು, ಅನಂತರ ತಿದ್ದುವನು. ಅವನ ಹೇಳಿಕೆಯಲ್ಲಿ ಸತ್ಯದ ಛಾಯೆಯು ಇರುವುದರಿಂದ ಅವನು ಯಾರಿಗೂ ಹೆದರಲಾರನು. ಪುರಾಣ ಕಾವ್ಯ ವಸ್ತುಗಳೇ ಆಗಲಿ, ಚಾರಿತ್ರಿಕ ಕಾವ್ಯಗಳೇ ಆಗಲಿ ಅಥವಾ ಇಂದಿನ ಸಾಮಾಜಿಕ ವಿಷಯಗಳಲ್ಲೇ ಆಗಲಿ, ಕವಿಯ ಸ್ವಭಾವ ತನ್ನ ಸುತ್ತು ಮುತ್ತಲಿನ ವಾತಾವರಣವನ್ನು ಪರಿಷ್ಕರಿಸಬೇಕೆಂದೇ ಆಗಿರುತ್ತದೆ. ಆದ್ದರಿಂದಲೇ ವರಕವಿಗಳ ವಾಣಿಯು ಅಮರವಾಗಿದೆ. ಅವರು ಸ್ತುತ್ಯರಾಗುತ್ತಾರೆ. ಅವರ ಹೇಳಿಕೆಯು ಅದ್ವಿತೀಯವಾದ ಕಟ್ಟು ಪಾಡಿಗೆ ಸಿಕ್ಕಿ ಅನಂತರದ ಕವಿಶ್ರೇಷ್ಠರೂ ಅವರ ಆವೇಶಕ್ಕೆ ಆಶ್ಚರ್ಯಪಡುತ್ತಾರೆ.

ಇಂದು ಭಾರತವು ಒಂದು ಆಂದೋಲನದಲ್ಲಿ ಮುಳುಗಿದ ಕಾಲವಾಗಿದೆ. ಜಾತಿಭೇದಗಳು ಹೇಗೆ ತಲೆನೋವನ್ನುಂಟು ಮಾಡುತ್ತವೋ ಅದೇ ರೀತಿ ಭಾಷಾ ಭೇದಗಳು. ಜಾತಿಗಳು, ಮತಗಳಾದರೂ ಹೋಗಲಿ; ಹೋಗಲೇಬೇಕು. ಆದರ ಅದ್ಭುತ ಸ್ಫೂರ್ತಿವಾಹಿನಿಯಿಂದ ಹರಿದು ಬಂದ, ಭೀಕರ ಸಂಸ್ಕೃತಿಯನ್ನು ಪೋಷಿಸಿದ, ಸಾವಿರಾರು ವರ್ಷಗಳಿಂದಲೂ ನಿರ್ಮಲ ಸಾಹಿತ್ಯವನ್ನು ಬೆಳೆಸಿಕೊಂಡು ಬಂದ ಭಾಷೆಗಳನ್ನು ಬಿಡಲು ಸಾಧ್ಯವುಂಟೆ? ಕನ್ನಡವು ಕರ್ನಾಟಕದ ಒಂದು ಹೆಮ್ಮೆಯಲ್ಲವೆ? ಹಿಂದೂಸ್ಥಾನದ ಕೆಲವೇ ಉಚ್ಚವರ್ಗದ ಭಾಷೆಗಳಲ್ಲಿ ಕನ್ನಡವೂ ಪ್ರಥಮ ಸ್ಥಾನದಲ್ಲಿ ನಿಲ್ಲುವುದಿಲ್ಲವೆ? ಅಂಥಾ ಗಾಂಭೀರ್ಯಯುಕ್ತವಾದ ಭಾಷೆಯನ್ನು ಪೋಷಿಸಲು ವರ್ಷಂಪ್ರತಿ ನಡೆಯುವ ಸಾಹಿತ್ಯ ಸಮ್ಮೇಳನ ಒಂದು ಮಾತ್ರ ಸಾಕೆ? ಇದಕ್ಕೆ ದಾರಿ ಏನೆಂಬುದನ್ನು ನಮ್ಮ ಹಿರಿಯ ಸಾಹಿತಿಗಳೇ ನಿರ್ಧರಿಸಬೇಕು. ಮುಂದಿನ ಶಿಕ್ಷಣ ಕ್ರಮದಲ್ಲಿ ದೇಶ ಭಾಷೆಗಳಿಗೊದಗುವ ಪ್ರಾಧಾನ್ಯತೆಯು ಆಶಾದಾಯಕವಾಗಿದೆ. ಜತೆಗೆ ಕ್ರಾಂತಿಕಾರಕ, ಪ್ರಗತಿಪರ ವ್ಯವಸ್ಥೆಗಳು ಮುನ್ನುಗ್ಗಿ ಸೋದರೀ

ಭಾಷೆಗಳೊಡನೆ ನಮ್ಮ ನುಡಿತಾಯಿಯೂ ಭಾವಿಸುವುದನ್ನು ನಾವು ಹರ್ಷದಿಂದ ನೋಡಬೇಕು.

ಸಾಹಿತ್ಯಕ್ಕೆ ರಾಜಕೀಯದ ಛಾಯೆ ಬಿದ್ದರೆ ಪಾಪವಲ್ಲವೆ? ಲೋಕದ ಯಾವುದೇ ಭಾಗದಲ್ಲಿ ಹಾಗೆಂದು ತೋರಿಬಂದರೆ ಸಾಹಿತ್ಯೋದ್ಧಾರಕ್ಕೆ ಎಡೆಯಿದೆಯೇ? ನುಡಿಗನ್ನಡ ಉತ್ಸವಗಳಲ್ಲಿ ಒಡನಾಡಿನ ಮೇಲ್ಮೆಯ ವಿಷಯ ಮಾತಾಡಿದರೂ ಅದು ಸಾಹಿತ್ಯಕ್ಕೆ ಯಾವ ರೀತಿಯಲ್ಲೂ ಪ್ರಯೋಜನವಾಗಲಾರದು. ಮೂಕ ಜನರನ್ನು ಸರಳೆಯಾದ ಭಾಷಾದೇವಿಯು ಸುಲಭದಲ್ಲೇನೂ ಒಲಿಯಲಾರಳು. ನುಡಿತಾಯಿಯು ಸರಳೆಯಾದರೂ ಮಹಾ ತಪಸ್ವಿನಿ. ಇದಂತಿರಲಿ –

'ಸೂರ್ಯಕಾಂತಿ'ಯ ವಿಷಯವಾಗಿ ಒಂದು ಮಾತು. ಇದು ಒಬ್ಬ ನವ್ಯ ಸಾಧಕನ ಪ್ರಥಮ ಪ್ರಯತ್ನವು. ಓದುಗರ ಕ್ಷಮೆಯನ್ನು ಯಾಚಿಸಲು ಎಡೆ ಇದೆ. ಚಿಕ್ಕವರು ದೊಡ್ಡವರು ಓದತಕ್ಕ ಕವನಗಳಿವೆಯೆಂದು ಭಾವಿಸಿಕೊಂಡರೂ 'ದೊಡ್ಡವರಿಗೆ' ಯೋಗ್ಯವಾದುದಿವೆಯೆಂದು ಹೇಳಲು ಲೇಖಕನಿಗೆ ಧೈರ್ಯವಿಲ್ಲ. ಹಿರಿಯರನ್ನನುಸರಿಸಿ ಹೋಗಲಿರುವ, ಅವರು ರಾಗವೆಳೆಯುವುದನ್ನು ನೋಡಿ ಹೇಗೇಗೊ ಕಿರಿಚಿಕೊಳ್ಳುವವನು ಈ ಲೇಖಕನು. ಜತೆಗೆ ಟೊಳ್ಳು ಉತ್ಸಾಹದ ಪರಿಣಾಮವೇ ಈ 'ಸೂರ್ಯಕಾಂತಿ.'

ಈ ಪುಸ್ತಕವು ಹೊರಬಂದುದು ಮಡಿಕೇರಿಯಲ್ಲಿರುವ ನನ್ನ ಮಿತ್ರರಾದ ಶ್ರೀ ಕೆ. ಡಿ. ಅಪ್ಪಚ್ಚು ಇವರ ಪ್ರೋತ್ಸಾಹದಿಂದ. ಇವರು ತಾತ್ಕಾಲಿಕ ದ್ರವ್ಯ ಸಹಾಯ ಮಾಡದೇ ಹೋಗಿದ್ದರೆ ಇದು ಇಷ್ಟು ಬೇಗನೆ ಬೆಳಕು ಕಾಣುತ್ತಿರಲಿಲ್ಲ. ಇವರಿಗೂ, ಅಂದವಾಗಿ ಮುದ್ರಿಸಿ ಸಕಾಲದಲ್ಲಿ ಒಪ್ಪಿಸಿದ 'ಕೊಡಗು' ಮುದ್ರಣಾಲಯದವರಿಗೂ ನಾನು ಕೃತಜ್ಞನಾಗಿರುವೆನು.

ಮಡಿಕೇರಿ, ತಾ. 27-12-47. ಐ. ಮಾ. ಮುತ್ತಣ್ಣ.

## — ಅನುಕ್ರಮಣಿಕೆ —

---

# ಸೂರ್ಯಕಾಂತಿ.



## ೧ ಬಂದೆನೊ—ಇದೊ ಬಂದೆ.

ಕರಿಕರೆದು ಬರುವೆನೊ ಬಂದೆನೊ ಇದೊ ಬಂದೆ,
ಕರ್ಣಾಟ ಸಾಗರ ಸೇರಲು;
ತಿಳಿನೀರ ತಳವನ್ನು ಸೇರ್ವಲು! || ಕರಿ ||

ಕೊಡಗಿನ ಮಲೆನಾಡ ಶಿಖರದೊಳುದಯಿಸಿ
ಹರಿಹರಿದೆ ಕನ್ನಡ ರಾಜ್ಯದೊಳ್;
ಕವಿರಸದ ಹನಿಯಾಗಿ ಸೇರ್ವಲು!

ಕಾಂತಿಯೊ ಇದು ಒಂದು ಕ್ರಾಂತಿಗೆ ಸಮನಾಗಿ
ಕರ್ಣಾಟ ಬಯಲೊಳು—ಈ ಕಾಂತಿ,
ದೇವಸೂರ್ಯನು ತೋರಿದೀಕಾಂತಿ! || ಕರಿ ||

ಸೂರ್ಯಕಾಂತಿಯಾಗಿ ನಾನು ಕರ್ಣಾಟ ಸಾಗರ
ಶೆರೆ ಮೇಲೆ ಥಳಥಳನೆ ತೇಲಿಸಿ;
ಸಹ್ಯಾದ್ರಿ ಏರಿದೆ ನೋಡಲು!

ವಜ್ರಪ್ರಕಾಶವು ಕರಿಮಣ್ಣು ಕರ್ಣಾಟ!
ಗೋದೆ ಕೃಷ್ಣಾ ತುಂಗಾ ಕಾವೇರೀ,
ತಾಯ್ಮಣಿಯರು ವಿಾಸಿ ಮುದವೇರಿ! || ಕರೆ ||

ನೂರಾರು ಜನಕುಲ ಹತ್ತಾರು ರಾಜ್ಯದೊಳ್
ನಾನೊರ್ವ ಕುಡುಪುತ್ರನದರೊಳು,
ಮುಳುಗಿದೆ ಕರ್ಣಾಟ ತೆರೆಯೊಳು!

ಹನಿಗೊಂದು ಕವಿಯಾಗಿ ಅಲೆಗೊಂದು ಮುನಿಯಾಗಿ
ಜಲಚರದ ತೆರದಲ್ಲಿ ವೀರರೊ;
ಶಕ್ತಿಪ್ರಧಾಯಕ ರಾಜ್ಯವೊ! || ಕರೆ ||

ಸಂಪತ್ತು ಸಾಮ್ರಾಜ್ಯ ಸಂಸ್ಕೃತಿ ಸಾಹಿತ್ಯ
ರಸಿಕ ಕಲೆಗಳ ತವರೂರೊ;
ಪಂಪಾದಿ ಕವಿಗಳು ಬಳೆದೂರೊ!

ಈ ರಾಜ್ಯ ಕರ್ಣಾಟ,—ಬಂದೆನೊ ಇದೊ ಬಂದೆ
ಸಾನದಕೆ ನಾನಾಗಿ ವಿಾಸಲೊ;
ತಾಯ್ನುಡಿ ಹಾಡುತ್ತ ಬಂದೆನೊ! || ಕರೆ ||

## ೧ ಸೂರ್ಯಕಾಂತಿ.

ಅಕೊ ಮೂಡ ಬಯಲಿನಲಿ
ಬೆಳ್ನೆರೆಯು ಚೆಲ್ಲಿಹರು
ಅದೋ ಮೂಡ ಬಾನಿನಲಿ
ರವಿ ಕಾರುತಿಹನು !

ಭುವಿಯೆಲ್ಲ ಬೆಳಕಿನಾ
ಮುನ್ನೀರಂತಾದುದು;
ಗಿರಿಯೆಲ್ಲ ನಗುವಂತೆ
ತಲೆಯೆತ್ತಿ ನೋಡುವುದು.

ಚಂದಿರನ ಓಡಿಸಿತು
ಇಬ್ಬನಿಯ ಮಳೆಯು;
ಬಿಳಿವಣ್ಣ ತಾರಕೆಯ
ಹಕ್ಕಿಗಳು ಕುಟುಕಿದುವು.

ಪುಷ್ಪಫಲ ತರುಲತೆಗಳ್
ಪೂತ ತೇಜದಿ ನಕ್ಕು,
ಸೂರ್ಯಕಾಂತಿಯು ಶಾಂತ
ಪ್ರತಿಭೆಯನು ಸಾರುವುದು !

ಕಮಲಗಳು ನಗುನಗುತ
ತಲೆಯೆತ್ತಿ ನೋಡುವುವು,
ಮಿಗವಕ್ಕಿ ಆ ಕಾಂತಿ
ಕ್ಷೀರವನೆ ಕುಡಿಯುವುವು.

ಸೂರ್ಯವಂದನೆ ಮಾಡಿ
ಸೂರ್ಯಸ್ನಾನವ ಮುಗಿಸಿ
ಸೂರ್ಯಕಾಂತಿಯ ಕುಡಿಯೆ
ವಿಶ್ವವೇ ಬಾಯ್ಬಿಟ್ಟುವು.

ಮೂಡದೆಸೆ ಮೂಡಿರಲು
ಹೆಮ್ಮೆಯಿಂ ಬೆಳಗು—
ಆ ಕಾಂತಿ ತೋರಿಯೇ
ಲೋಕಗಳ ಮಿನುಗು!

---

## ೩ ಜ್ಞಾನದ ನೊರೆ.

ತಾರೆಗಳು ಶತಕೋಟಿ ಉದಿಸಿದರು ಬಾನಿನಲಿ,
ವಾರಿ ತೆರೆಗಳ ದೀರ್ಘ ಆರ್ಭಟವೆ ಹೆಚ್ಚಿರಲಿ,
ಶೂರ ಪುರುಷರು ಕಾಯುದೊಳವಧಿಯನು ಮುಟ್ಟಿರಲಿ,
ಸಾರ ಸಗ್ಗವು ತೋರ್ಪ ಸ್ತುತಿಹಲವು ಘೂರ್ಮಿಸಲಿ—
ಯಾರು ನೋಡುವರೆನ್ನ—ಸ್ಮರಿಪರುಂ ಇಲ್ಲಿ?

ಧಾರೆಧಾರೆಗಳಾಗಿ ಜಗದಿ ನೆತ್ತರವೆ ಪ್ರವಹಿಸಲಿ,
ನೀರೆಯರ ಕುಡಿನೋಟದಿಂ ಬಲವೆ ತಗ್ಗಿರಲಿ,
ಭಾರವದು ಧರೆಗೀವ ಅಜ್ಞಾನ ನಾಟಿರಲಿ,
ಚೋರತಂತ್ರಗಳಲವು ನಿರ್ಭಯದಿ ಹಬ್ಬಿರಲಿ,—
ಯಾರು ನೋಡುವರೆನ್ನ—ಸ್ಮರಿಪರುಂ ಇಲ್ಲಿ?

ಬಡತನದ ಬೇನೆಯುಲಿ ಶತವರ್ಷ ಬಳಲಿರಲಿ,
ನಡುನೆಟ್ಟನಿಡಿಕಿಲಡೆ ಶತಮಾಸ ಬಾಳಿರಲಿ,
ನಿಡುಮರವು ಕಾನನದಿ ನಿಬಿಡಾಗಿ ಹಬ್ಬಿರಲಿ,
ಜಡದೇಹವದರಂತೆ ನೀರಸವಿ ಇರಲಿರಲಿ,—
ಯಾರು ನೋಡುವರೆನ್ನ—ಸ್ಮರಿಪರುಂ ಇಲ್ಲಿ?

ಗತಕಾಲ ಸಾಹಿತ್ಯ ಸಮಗ್ರವನು ಜಯಿಸಿರಲಿ,
ಗತವೀರ ಚಾರಿತ್ರ್ಯ ಶಾಸನವ ಪಠಿಸಿರಲಿ,
ಗತಲೋಕ ವೈರಾಗ್ಯ ಸಂಪದವ ಬಿಂಬಿಸಲಿ,
ಗತಜೀವ ನಿರ್ವಾಣ ಸಾಯುಜ್ಯ ನೆನೆದಿರಲಿ,—
ಯಾರು ನೋಡುವರೆನ್ನ—ಸ್ಮರಿಪರುಂ ಇಲ್ಲಿ?

ಕ್ರಿಮಿಯಿದುವೆ ಸತ್ಕರ್ಮ, ಅದರಂತೆ ನಾನೆಲ್ಲಿ?
ನಿರ್ಮಿಸಿದ ಬಾಳಿದುವೆ, ಮೂಭೋಗ ಇನ್ನೆಲ್ಲಿ?
ಧರ್ಮಧರ್ಮಗಳ ಬಾಳೆಲ್ಲ ಅಂದಾಯಿತು—ಈಗೆಲ್ಲಿ?
ನಿಮಿಷ ನಿಮಿಷದ ಚಿಂತೆ ಇಂತಲ್ಲದಿನ್ನೆಲ್ಲಿ,—
ಯಾರು ನೋಡುವರೆನ್ನ—ಸ್ಮರಿಪರುಂ ಇಲ್ಲಿ

---

# ೪ ಸ್ವತಂತ್ರ ಭಾರತ.

(ಆಗಸ್ಟ ೧೫–೧೯೪೭.)

ಭಾರತೀ ಸತೀಯು ಗೆಲುವು ಮಂದಹಾಸ ನೋಡೊ ! || ಪಲ್ಲ ||

ತ್ರಿವರ್ಣದಾ ಧ್ವಜವ ಬೀಸಿ ಶೂರಕುವರಿ ಏರಿ
ಬಂದಳದೋ ಪಾರತಂತ್ರ್ಯ ಪಾಶ ಮುರಿದು ನಾರೀ ! || ಅ. ಪ ||

ನೊಂದಮೊಗವು ಅಂದಸೊಗವು ಎಲ್ಲ ಮ್ಲಾನವಾಗಿದೆ,
ನೂರುವೆರಡು ವರುಷವೆಲ್ಲ ದಾಸ್ಯತನದೊಳಡಗಿರೆ;
ತನ್ನ ತಾನು ಮರೆತು ಜೊಳ್ಳು ಪುತ್ರರನ್ನು ನಂಬಿರೆ,
ಆತ್ಮಖ್ಯಾತಿ ಘನತೆಗಳನು ಕಳೆದು ತಾಯಿ ನೊಂದಳೊ ! || ಭಾ ||

ಬಡತನಾದಿ ಬೇನೆಯಿಂದ ಬೆಂದು ಬಳಲಿ ಬಾಡಿತು
ದೇಶದಲ್ಲಿ ಶಾಂತಿ ಕಾಂತಿ ಕಳೆದು ಭ್ರಾಂತಿ ತುಂಬಿತು,
ಹಿಂದೂದೇಶ ಕರ್ಮಭೂಮಿ ಧರ್ಮಕ್ಷೇತ್ರ ಖ್ಯಾತಿಯು
ಶೂರ ಆರ್ಯಜನರ ಸ್ಥೈರ್ಯ ಶೂನ್ಯವಾಗಿ ಪೋದುವೊ ! || ಭಾ ||

ಒಲಿದು ನಲಿದು ಮುಗುಳು ನಗೆಯ ತೋರಿ ಹಾಡಿ ಬರುವಳು
ಹೂವ ಮುಡಿದು ತಿಲಕ ಹಚ್ಚಿ ಧ್ವಜವ ಹಾರ್ಸಿ ಮೆರೆವಳು,
ಕಾಲಗೆಜ್ಜೆ ಝಣ್ಣ ಝಣರೆಂದೆನಿಸಿ ಕುಣಿದು ಕರೆವಳು
ನಲಿದಳೀ ನಲ್ವತ್ತು ಕೋಟಿ ಕುವರರೊಡನೆ ಹರುಷದಿ ! || ಭಾ ||

ಅಹೋ ಏನು ಧಣಿದರವಳ ವೀರ ತ್ಯಾಗಿ ಪುತ್ರರು,
ದೇಶಬಂಧು ಲೋಕಮಾನ್ಯ ಮೋತಿಲಾಲ ಶಿಷ್ಟರು;
ಆ ನೇತಾಜಿ ನೆಹರು ವಲ್ಲಭಾದಿ ಗೋಖಲೇಯರು,
ದಣಿದು ಕಾದು ಸತ್ತ ಹಿರಿಯ ಕಿರಿಯ ಹಲವು ವೀರರು! || ಭಾ ||

ರಕ್ತ ಹರಿಸಿ ತನುವ ಸವೆಸಿ ಧಣಿದರಲವು ಜನಗಳು
ಏಸು ಕಾಲ ಪಾರತಂತ್ರ್ಯದಿಂದ ಇರ್ದ ದೇಶದೊಳ್;
ಶೂರಗಾಂಧಿ ರಾಜಋಷಿಯು ಬಡವಗೊಲಿದ ದೇವನು
ಸತ್ಯಾಗ್ರಹಾದಾಯುಧವೇ ದೇಶ ವಿಜಯಕಾಯ್ದನು—! || ಭಾ ||

ಬಂದಳದೋ ವಿಜಯಭೇರಿಯನ್ನು ಮೊಳಗಿ ಮಾನಸಿ,
ಗಳಿಸಿದೊಂದು ಕೀರ್ತಿಯನ್ನು ಕಂದರೊಳಗೆ ಹಬ್ಬಿಸಿ;
ಧರೆಯ ರಾಷ್ಟ್ರಗಳಲಿ ನಮ್ಮ ಪ್ರಭೆಯು ಇನ್ನು ಬೀರ್ವುದು,
ಧವಳ ಕೇತು ಹಾರ್ಸಿ ತಂದಳದೋ ಭಾರತೀವಧು! || ಭಾ ||

# ೫ ಚಂದ್ರ.

ತುಂಬಿದ ಚಂದ್ರನೆ ನೀ ಬಾರ
ತುಂಬಿದ ಭಾಗ್ಯವ ನೀ ತಾರ
ನಂಬಿದ ಗತಿಗೆ ನೆಲೆ ತೋರ!

ಆಗಸ ಮಿತ್ರನು ನೀನದಕೊ
ತಂಪನು ಸುರಿಸುತ ನೀ ಮಿನುಗೊ
ಭೂಮಿಯು ಕನ್ನಡಿ ನೀನೆ ಕಣೊ

ನೈದಿಲೆ ನಗುವುದು ನೀ ಬರಲು
ನಲ್ಮೆಯ ಹೂವಿಗೆ ನೀ ಮುಗುಳು
ಸಂತಸವೀಯುತ ನೀ ಬಾಳು!

ವಸಂತ ಲಕ್ಷ್ಮಿಯು ಕಾಲ್ಚೆಂಡು
ಆಡುವ ಮಕ್ಕಳ ಮನವುಂಡು
ತೋರುವೆ ತೇಲುವೆ ನೀ ದುಂಡು!

ತಂಪನು ಚೆಲ್ಲುವೆ ನೀ ಚಂದ್ರ
ಮೋಹವ-ಬೀರುವೆ ನೀನಿಂದ್ರ
ರಸಿಕರ ಬಾಳಿಗೆ ನೀ ಕೇಂದ್ರ!

ಏರುವೆ ಮಿನುಗುವೆ ನೀನೆಲ್ಲಿ?
ಮುಗಿಲೊಳು ತೇಲುವೆ ಪೋಪೆಲ್ಲಿ?
ನಾಚುಗೆಯೋ ಹೇಳು ನಿನಗಲ್ಲಿ?

ರಾಮನು ಅತ್ತುದು ನಿನಗಾಗೊ?
ಹನುಮನು ಹಾರಿದು ನಿನಗಾಗೊ?
ಗಣಪತಿ ಶಾಪವು ನಿನಗಾಗೊ?

ಈಶ್ವರ ಶಿರವನು ಮುಡಿಸಿರುವೆ
ನೀರಲಿ ಬಾನಲಿ ತೋರಿರುವೆ
ಪ್ರಣಯಿಯ ನೋಟದ ಮುಗುಳಿರುವೆ!

ಹುಣ್ಣಿಮೆ ದಿನವೇ ನಿನಚೆಲುವು
ಕಣ್ಣಿನ ಭಾಗ್ಯವೆ ಆ ಬರವು
ಸ್ವಪ್ನದ ಸುಖವೇ ನಿನ್ನೊಲವು!

ಪೋಗದಿರೆನ್ನೀ ಚಂದಿರನೆ
ತೆಂಗದಿರೆನ್ನೀ ಸುಖವೀಣೇ
ಭುವಿಯನು ಬೆಳಗೊ ಮಮಪ್ರಾಣೇ!

---

# ೬ ಅವಳು ಯಾರು ?

ಹಸುರು ಸೀರೆಯನುಟ್ಟು ರಂಗು ಬಳೆಗಳ ತೊಟ್ಟು
ತನ್ನ ಗೆಳತಿಯರೊಡನೆ ನಡೆದವಳು ಯಾರು ?
ಅರಳಿಯಾ ಮರದಡೀ ಹೂಬುಟ್ಟಿ ಕೆಳಗಿರಿಸಿ
ಚೆಂಡು ಹೂಗಳ ಕೋದು ಹಾಡಿದಳು--ಯಾರು ?

ಹಣೆಗೆ ತಿಲಕವನಚ್ಚಿ ಮುಡಿಗೆ ಹೂಗಳ ಮುಚ್ಚಿ
ಮೆಲ್ಲಡಿಯನಿಡುತಿಡುತ ಪೋದವಳು ಯಾರು ?
ಜಾರುತಿಹ ಸೆರಗನ್ನು ಎಡೆಯೂರೆ ನಿಲ್ಲಿಸುತ
ತನ್ನನ್ನು ತಾನಾಗಿ ನೋಡುವಳು–ಯಾರು ?

ಕಡೆಗಣ್ಣು ಉರುಳಿಸುತ ತನುಲತೆಯ ಕೊಂಕಿಸುತ
ನಸುನಾಚುಗೆಯ ತೋರಿ ನಡೆದವಳು ಯಾರು ?
ಕೆರೆ ಏರಿ ಕಟ್ಟೆಯಲಿ ಕಾಲ್ತೊಳೆದು ಜಾರಲು
ಬೆರಗಾಗಿ ಆಚೀಚೆ ನೋಡಿದಳು–ಯಾರು ?

ಮಣಿಸಾಲು ಕೆಂಪೋಲೆ ಜುಂಜುಮುಕಿ ಕಿವಿಯೋಲೆ
ಮುಂಗುರಿಯ ಮೂಗುತ್ತಿ ಹಾಕಿದಳು–ಯಾರು ?
ಕಾವೇರಿ ಜಾತ್ರೆಯಲಿ ಜವ್ವನಿಗ ತಂಡದಲಿ
ತಾನೊಲಿವನಾರೆಂದು ಹುಡುಕಿದಳು–ಯಾರು ?

ಫಣಿವೇಣಿ ಆಚೀಚೆ ಒಂಟೆಸರ ಕೊರಳಾಚೆ
ಕಾಲ್ಬಳೆ ಕಿರುಗೆಜ್ಜೆ ಧರಿಸಿದಳು ಯಾರು ?
ಕೇರಿ ಹೆಂಗಳ ಸಾಲು ಸರಸವಾಡುತ ತಾನು
ಊರ ಜಾತ್ರೆಗೆ ಅಂದು ಪೋದವಳು ಯಾರು ?

ದನಮೇಪ ಬಯಲಿನಲಿ ತನ್ನ ಕಾಳದ ಹಾಡ
ತೂಗುಯ್ಯಲೆ ಹಾಡಿ, ಹಾಡಿದಳು–ಯಾರು ?
ಕೆಂಬಕ್ಕಿ ಶುಕ ಪಿಕ ಮಲ್ಲಳಿಯ ಹಾಡುಗಳ
ಕೇಳುತಲೆ ತಾನಾಗಿ ನಲಿದವಳು ಯಾರು ?

ಕೊಡಪಾನ ನೀರೊಡನೆ ಘುಳುಗುಳು ಮಾತಾಡಿ
ಮೆಟ್ಟಲಲಿ ರಂಗೋಲಿ ಬಿಡಿಸಿದಳು–ಯಾರು ?
ಹಸುರಾಂತ ವನಶೋಭೆ ತಾನುಟ್ಟ ಹಸುರುಡಿಗೆ
ಒಂದಾಗಲಿಲ್ಲೆಂದು ಅಂದವಳು ಯಾರು ?

ಪೂರ್ಣಚಂದ್ರನ ಚೆಲುವು ಕಂಡು ತನ್ನಯ ರೂಪು
ಅಂತಾಗಲಿಲ್ಲೆಂದು ಗೊಣಗಿದಳು–ಯಾರು ?
ತನ್ನ ಅಪ್ಪನ ಮಾಂವ ಎಂದು ತಾ ಕರೆವವನು
ಯಾರಿರುವನೋ ಎಂದು ನೆನೆಸಿದಳು ಯಾರು ?

---

## ೭ ಆಶಯ.

ಇಹದ ಸುಖವನು ಬಯಸಿ, ಆತ್ಮಯೋಗದ ಬಲವು
ತನ್ನದೆಂಬುದ ನೆಚ್ಚಿ, ಮುಂಗುರಿಯ ದೃಷ್ಟಿಯನು
ನಂಬಿಕೆಯ ನೇತ್ರದಲಿ ನೋಡುತಲು, ಜೀವನದ
ಧ್ಯೇಯವನು ದಿಗ್ಭ್ರಾಂತ ತರಂಗದೊಳಾಡಿಸುತ,
ಕೋಟಿಮಾನವರಲ್ಲಿ ತನ್ನ ಪ್ರತಿಭೆಯ ಸಾಕ್ಷ್ಯ
ಸಾರುತಲಿ ಪಾಡುತಲಿ, ಮಾನವನು ತಾನ್ಪಡೆದ
ಜನ್ಮಸಾರ್ಥಕವೆಂದು ಜಡನಂತೆ ಮರುಳಾಗಿ
ವಿಶ್ವನಿಯಮದ ಎದುರು ಪಕ್ಕವಿಲ್ಲದ ಪಾತೆ-
ಯಂತೆ ಸೇರ್ವನು ಸೋಲ ಸುರಂಗವನ್ನು!

ಕಾಲಪುರುಷನು ತಾಳ್ದ ಅನುಭವವೆ ಅದು ಚಿತ್ರ!
ಎಲ್ಲಿಂದೆಲಿಗೆ ಹಾಯ್ದು ಎಂತೆಂಥಾ ಭೀಕರದ
ನೋಟವನು, ಜನತೆಗಳ ಭಾಗ್ಯ ದೌರ್ಭಾಗ್ಯಗಳ
ಜೀವನವ ನೋಡಿ ಕನಿಕರಗೊಂಡು, ಮನಸಿನಾ
ಭಿತ್ತಿಯಲಿ ಆ ಹಾಳುಬಾಳಿನಾ ಬೇಗುದಿಯ
ಚಿತ್ರವನು, ಆ ಕಾಲ ಮಹಿಮಾ ಮಹತ್ವವನು
ಒಂದಾಗಿ, ಗುರುಜನರ ನೃಪಜನದ ತತ್ವದಿಂ
ಆಳ್ಕೆಯಿಂ ಬಗೆ ಬಗೆಯ ಸೋಗನ್ನು ಜಗಪಡೆದ
ತೆರವನ್ನು ನೋಡುತೋಡುತ ಸಾರ್ವುದಾಹಾ!

ಎನ್ನದೆನ್ನದುವೆಂದು ಔತ್ಕೃಷ್ಟ್ಯವಾದದಲಿ,
ಒಲ್ಮೆ ನಲ್ಮೆಯು ಸಖನು ಎಂಬ ವಿಚಾರದಲಿ,
ರಸಿಕ ಜೀವನ ತಾಳ್ವ ಮೋಹ ಸಂಘಟನೆಯಲಿ,
ಸಮರನಾದದಿ ಏಳ್ವ ಜನದ ತಳಮಳದಲ್ಲಿ,
ವೈರಾಗ್ಯ ಜೀವನವು ಪಡೆವ ಸಾರ್ಥಕದಲ್ಲಿ,
ಮನಕೆ ತೋರುವವೊಂದು ವಿಸ್ಮಯೊಂತಕವಾದ–
ಧ್ವನಿಯು ಲೋಕಕೆ ಸಾರ್ವ ಮಂಗಲಾಮಂಗಲವೊ
ಹೇಳ ಬಲ್ಲವರಾರು? ಹೃದಯೂದಾವೇಶವನು
ಅನುಭವವೆ ಒಪ್ಪಿಸುವುದು ಕಾಣ್ಕೆಯಾಗಿ!

ಲೇಖನಿಯನುರುಳಿಸೆನು ಕವಿಯೆಂಬ ಹೆಮ್ಮೆಯಲಿ,
ಪಾಡ್ದನಿಯನೊಪ್ಪಿಸೆನು ಗಮಕಿಯೆಂಬರ್ಥದಲಿ,
ಜಗದಿರವ ಚಿತ್ರಿಸೆನು ಚಿತ್ರಿಕನ ರೀತಿಯಲಿ,
ತತ್ವಗಳ ನೊರೆಯೆನಾ ತಾತ್ವಿಕನ ಸೂಕ್ತಿಯಲಿ,
ಎಮ್ಮ ಜೀವದ ಛಾಯೆ ಪರರ ಬಾಳಿನ ಮಾಯೆ
ಹಾಸುಹೊಕ್ಕಾಗಿ ತರಂಗಗಳ ತಲ್ಪದಲಿ
ಬಿದ್ದುರುಳುವುದ ಕಂಡು ಮನವಾರೆ ಸೋಲುತಲಿ
ನೀಳ್ಗತೆಯು ಕಿರಿದಾಗಿ ವಿಷಯಗಳ ಲಘುವಾಗಿ
ಅಂಥ ಸಾಧಕನಂತೊರೆಯಲಿಳಿದೆನೊರ್ವ!

ಬ್ರಹ್ಮಾಂಡ ನೆಲಗಟ್ಟು ಪ್ರೇಮದಾಧಾರದಲಿ
ವಿಶ್ವನಿಯಮದ ಬಲವು ಪ್ರೇಮಸುಧೆ ಧಾರೆಯಲಿ,

ಮಾನವನ ವ್ಯವಹಾರ ಪ್ರೇಮ ಪೋಷಾಕಿನಲಿ,
ಜೀವಿಗಳ ಸ್ವಾತಂತ್ರ್ಯ ಪ್ರೇಮಪ್ರಲಾಪದಲಿ–
ಅಡಗಿರಲು, ಈರೇಳು ಲೋಕದಾ ಘಟನೆಯಲಿ
ಪ್ರೇಮಜಾಲದಿ ಏಳ್ವ ಪ್ರಣಯಧೂಮದ ರೂಪು
ಅದೆಂತು ವೈಚಿತ್ರ್ಯ! ಎಂತು ಮನೋಹರವು!!
ಎನ್ನ ಸೊಲ್ಲನು ಇಲ್ಲಿ ತದ್ವಿಶೇಷದ ಚೆಲ್ಲಿ
ನೋಟಕರ ಹಾಯೆನಿಸಲಪದಳವೊ!

ಮನಸಿಜನ ಮಾಯೆಯಲಿ ಜನನಲಿಹ ಮೋಹದಲಿ
ಕವಿಪಾಕವೊಸರುವುದು ಆತ್ಮರಸಬಟ್ಟಲಿಂ!
ಸುಖದ ದುಃಖದ ಬೇರೆ ಪಾಲು ಎರಡನು ಮಾಡಿ
ಸೋಗಿನನುಭವದಲ್ಲಿ ಸವಿದು ಸವಿಕಹಿಯನ್ನು
ನೋಡಿ ಲೋಕದ ಬಗೆಯ ಚಿತ್ರಿಸಿಡುತಲಿ ವಿಧವ–
ಹಾಹಾಕಾರದ ಕಾಣ್ಕೆ ಗುಣದ ದೋಷದ ಪೂಣ್ಕೆ
ಒಂದನೊಂದರಲಿಟ್ಟು, ತನ್ನ ಇರವನು ತನ್ನ
ಬುದ್ಧಿಬಲದಿಂ ಬೆಳಗಿ ಆದರ್ಶ ಜೀವನಕೆ
ಆಧಾರನಾಗಿರಲು ಸಲ್ವುದೆನಿತೊ!

---

# ೮ ಗೀತೆಯ ಹುಟ್ಟು.

ಧರ್ಮಕ್ಷೇತ್ರದ ಭೂಮಿ
ಅಸಮ ಬಲ ಇಕ್ಕಡೆಯೊ–
ಳದರ ಮಧ್ಯೆ ಗಂಭೀರ–ಶ್ರೀಕೃಷ್ಣನು.
ಕುರುಕ್ಷೇತ್ರ ಕುರುಸೇನೆ
ಕೌರವನ ರಣಘೋಷ–
ಸೇನಾನಿ ಫಲ್ಗುಣನು ಬಾಣಸಹಿತ.

ಕುರುಸೇನಾ ಕಡಲಲ್ಲಿ
ತೇಲುತಿಹ ಅರ್ಜುನನ
ರಥವೊಂದು–ಸಾರಥಿಯು ಶ್ರೀಕೃಷ್ಣನು;
ರೋಷ ಸಹನೆಯ ಮಧ್ಯೆ
ಬೇಕೊ ಬೇಡೆಂಬುದರ
ದ್ವಂದ್ವದಲಿ–ಜೀಕಲಾಡುತಯಿರ್ದುದು!

ಭಾರತದ ವಿಧಿನಿಯಮ–
ವನ್ನು ನಡೆಸುವ ಭರದಿ
ಸೇರಿರುವ ಪ್ರಶಾಂತ ಸೂರ್ಯೋದಯ
ಸೂರ್ಯಕಾಂತಿಯ ನಲ್ಮೆ
ಪಾರ್ಥಚಿತ್ತದ ಒಲ್ಮೆ
ಒಂದಾಗಿ ಸೇರಿದುವು ಕುರುಕ್ಷೇತ್ರದಿ.

ನೋಡಿದನು ಬಂಧುಗಳ,
ಗುರುಗಳನು ಹಿರಿಯರನು–
ಬೆಂದವನ ಸಂತೈಸೆ ಚಕ್ರಧಾರಿ!

ಉಸುರಿದನು ಗೀತೆಯನು–
ವಿಶ್ವಯೋಗದ ಗುಟ್ಟು
ಬಿಚ್ಚಿದನು–ಅರ್ಜುನಗೆ ಅತಿಕಾಮಿಗೆ.

ಕೌರವನ ಹಠಯೋಗ
ಭಾರತದ ಬಲತ್ಯಾಗ–
ಕುರುಕ್ಷೇತ್ರ ಋಣಮುಕ್ತ ಧರ್ಮಕ್ಷೇತ್ರ!
ಗಂಭೀರ ಶಾಂತಿಯಿದು,
ಮೂಕವಾಗಿಹ ಸೇನೆ,
ರಥಗಾಲಿ ಸ್ತಬ್ಧತೆಯಿಂ ಗೀತಮಂತ್ರ!

ಕರ್ಮಯೋಗಿಯು ಕೃಷ್ಣ
ರಾಜಯೋಗಿಯು ಪಾರ್ಥ
'ಕಿಂ ಕರ್ಮಾಕರ್ಮ'ಗಳ ವಾದಗಳಲಿ,
ಸತ್ವ ರಾಜಸ ತಮದ
ಹುಟ್ಟು ಸಾವಿನ ಬಲದ
ವಿಶ್ವರೂಪದ ಗೂಢ ರಹಸ್ಯಗಳನು.

ಚೊಕ್ಕ ಭಾಷೆಯ ಶ್ಲೋಕ,
ಪ್ರಶ್ನೆಗುತ್ತರ ಮಾತು–
ಏನು ಸೊಗವೊ ಅವರ ಗುರುಶಿಷ್ಯತೆ!
ತುಂಬು ಕೂರ್ಮೆಯ ಮಾತು!
ಉಪನಿಷತ್ಕಲಶದ ಮಧುವು!
ವಿಶ್ವವ್ಯಾಪಿತ ವಾಣಿ–ಅಮರಗೀತೆ.

## ೯ ನರ್ತಕಿ ಬಂದಳು.

ನರ್ತಕಿ ಬಂದಳು ಛಲ್‌ಛಿಲ್ ನಾದದಿ
ಥಮು ಥಮು ತಾಳಕೆ ಕುಣಿಯುತ್ತ
ಪಾತರಗಿತ್ತಿಯು ಆ ಕುಣಿತ.
ಪಾರ್ಥ ಸುಭದ್ರೆಯು ರಾಧಾಕೃಷ್ಣರ–
ನೊಬ್ಬಳೆ ತಾನೆಂದೆಣಿಸುತ್ತ
ರಂಗಸ್ಥಳದಲಿ ತಿರುಗುತ್ತ.

ತುಟಿಯಿಂದುರುಳುವ ಹಾಡಿನ ತನಿರಸ
ಮೌಕ್ತಿಕ ಮಣಿಯಂತುರುಳುವುದು;
ತಾಳದ ಓಜೆಗೆ ಜಾರುವುದು!
ಕತ್ತಲೆ ನಡುವಣ ಚಂದ್ರನ ಬಿಂಬವೊ
ಕೆದರಿತ ಹೆರಳದು ಇಕ್ಕಡೆಯು
ಸುಂದರ ಮುಖವೊ ಮಿನುಗೆಲೆಯು.

ಕಣ್ಣಾಲಿಗಳನು ಹೊರಳಿಸಿ ಉರುಳಿಸಿ
ದುಂಡನೆ ರುಂಡವನಲುಗಾಡಿ;
ಕಣ್ಣನು ಮೂಗಿನ ಮೇಲಿರಿಸಿ
ಕುಣುಕುಣು ಮೊಣಕಾಲಾಟದಿ ನೋಟದಿ
ಕೊಂಕಿಸಿ ನಡುವನು ಆ ಮಳ್ಳಿ
ಚಂಚಲ ಮಿಂಚಿನ ಬಾನ್‌ಬಳ್ಳಿ!

ಫಾರಸಿ ಹಿಂದೀ ವಂಗೀಯು ಕಲೆ
ಒಂದಾಯಿತು ಇಂದೀ ವೇಳ!
ಬೃಂದಾವನದ ಆ ಲೀಲಾ!
ಬಂದಳು ನರ್ತಕಿ ಕೈಗಳ ಬೀಸುತ
ಕೆಳವೇಲಾಂಗಗಳಾಡಿಸುತ
ಮೆಟ್ಟುತ ಬೆಟ್ಟಲಿ ಆ ಕುಣಿತ.

ಓಹೋ ಓಹೋ ಕನ್ನಡ ಗಾನ
'ಕಥಕಳಿ'ಯೂಟದ ಬಯಲಾಟ
ಭರತನ ನಾಟ್ಯದ ಮನನೋಟ.
ಲಾಸ್ಯಾನರ್ತನ ನಟಕೇಸರಿ ಮನ
ಜುಂ ಝುಂ ಛಲ್ ಛಲ್ ಈ ಓಜ,
ನರ್ತನ ತೋರಿದ ನಟರಾಜ.

ಹೊರಳುವ ಅಂಗಗಳಾಟವ ನೋಡಿರೊ
ಬೆರಳನು ತೋರುವ ತಿರುಳನ್ನು
ಕೊಂಕಿಸಿ ಕಾಲಿನ ನಿಲುವನ್ನು!
ದುಂಡನೆ ತಲೆಯನಲುಗಿಸಿ ತೋರುವ
ಮನ್ಮಥ ಕರೆಯೊ ಅದು ಕೇಳೊ!
ಚಕ ಚಕ ಎದೆಯು ಗೆಲುನೋಡೊ.

ಬಗ್ಗಿದಳೆದ್ದಳು ಹಾರಿದಳೋಡಿದ-
ಳೆಂತೀ ಆಟದ ಈ ಬಲ್ಮೆ
ಕುಲುಕಿತ ಅಂಗಗಳೀ ನಲ್ಮೆ.
ಊರ್ವಶಿ ರಂಭೆಯುದಾದಿನದಾಟವ
ತೋರುತ ನರ್ತಕಿ ಬಂದಳಡೊ,
ಕುಡಿನೋಟಾಡಿಸಿ ಕುಣಿವಳಡೊ!

ಗಿರಿಗಿಟೆ ತಿರುಗಿದ ತೆರದಲಿ ತಿರುಗಿತು,
ಥಕಥಕ ಧೀಂಕಿಟ ಹಾರಿದಳು
ಗಾಳಿಯು ನರ್ತನ ತೋರಿದಳು.
ವಾನರ ಚೇಷ್ಟಾ ಗೋಷ್ಠಿಯುಲಿರಿತಳು
ಹಿಂದೂ ಮುಂದೂ ಜೋಲಾಡಿ
ತನಗೇ ತಾನೇ ತೂಗಾಡಿ.

ಸೂರ್ಯನ ಕಾಂತಿಯು ನೋಡುತ ಭ್ರಾಂತಿಯಿಂ
ಥೈ ಥೈ ಹಾರಿತು—ಆ ರಭಸ
ಲೇ ಲೇ ತಟ್ಟುವ ಪದನ್ಯಾಸ!
ಢಮರುಗ ಭಾರಿಸಿ ಲೋಕವ ತಿರುಗಿಸಿ
ನರ್ತನ ತೋರಿದ ಪರಮೇಶ;
ಬಂದಳು ನರ್ತಕಿ-ಆ ವೇಷ!

---

# ೧೦ ಕಂಡೆನೊ ನಾ!

ಕಂಡೆನೊ ನಾ! ಬೇವಿನ ಜೀವದ ಈ–ಬಾ–ಳು!!

ಈ ಲೋಕ ಈ ರಾಜ್ಯ ಈ ಊರು ಈ ಮನೆ
ಕಾಲಾನುಕ್ರಮದಲ್ಲಿ ಜನರಾಶಿ ಒಂದಾಗಿ,
ಬಲ್ಲಿದ ಬಡವನ ಶತಕೋಟಿ ಸಂಸಾರ— || ಕಂ ||

ಸಾಗರ–ಭೂಮಿಯು ನಡೆ ಕಂಡು ಮೊರೆವುದೊ,
ಯೋಗ ತಾರಕೆಗಳು ಮಿಣುಮಿಣುಕಿ ನಗುವುದೋ;
ಆಗದೀ ಜನಭಾರ ಕಲ್ಭೂಮಿ ಆಳುವುದೊ— || ಕಂ ||

ತತ್ವಗಳೊಂದೆಡೆ ಉದ್ಧಾರ ಕಾಯ್ವುವು,
ನೀತಿಗಳ್ ಬಿರುಗಾಳಿ ಅಲೆಯೊಳು ಸಾಗ್ವುವು;
ಮಾತು ಮಾತಿನ ಜೀವ, ತೋರಲಿದರೆ ಜೀವ— || ಕಂ ||

ಅವಸರದ ಆಲಾಪ, ದಣಿದ ದೇಹಿಯ ತಾಪ,
ಭುವನತ್ರಯದ ಪಾಪ, ಸಮ್ಮಿಳಿತ ಮಾಕೂಪ,
ಭವ ಸರಸಿಜನದು ಸರಸತಿಯರ ಶಾಪ— || ಕಂ ||

ಮನುಜನ ಮನಶ್ಶಕ್ತಿ ಮರುಳಾಗಿ ಕಲ್ಲಂತೆ,
ತನುಮನವೆಲ್ಲವು ಸ್ವಾರ್ಥಕ್ಕೆ ಮರೆಹೋಗಿ
ಜನಗಣವು ಪಶುಗಣವಾದ ವೈಚಿತ್ರ್ಯವೊ— || ಕಂ ||

ರಂಗುರಂಗಿನ ತಳಕು, ಬಣ್ಣಬಣ್ಣದ ಬೆಳಕು,
ಶೃಂಗಾರ ಸಂಪತ್ತು ನಗುಸರಸ ಸವಿಮಾತು,
ಭೃಂಗಕುಂತಲ 'ಷೋಕು', ಕೃತಕ ಜೀವದ ಮಂಕು— || ಕಂ ||

ಜನ ಜನಿತ ಜನಮೋಹ, ಜೀತ ಜೀತದ ಜೀವ,
ಗಣನೀಯ ಗಂಭೀರ, ಚಂಚಲ ವ್ಯವಹಾರ,
ದಣಿದ ಬಾಳಿನ ಸಾರ ಸಾಕು ಸಾಕೀ ಹಾರ! || ಕಂ ||

ಒಂದಿಽನ ನಾನೊಂದು ಪೂಗಿಡವ ನಟ್ಟೆನೊ,
ಮುಂದಾರು ದಿನ ಕಳೆದು ನಾನೋಡಿ ಅತ್ತೆನೊ;
ಅಂದಿಽತು ನನಗಽದು 'ಚಿಗುರೆಽಲೆ ಕೊಡೆ'ನೆಂದು— || ಕಂ ||

ಹಸುರಾಂತ ವನಶೋಭೆ ನೀಲಾಕಾಶದ ಪ್ರಭೆ,
ಹಸುಗೂಸು ಹುಸಿ ಸೊಬಗು ಪಂಚಭೂತದ ಬೆಡಗು,
ನಸುನಗುತ ಒಲಿದಽರು ವಿರಸ ಪ್ರಕೃತಿಯದೊ— || ಕಂ ||

ಜನಕೋಟಿ ಈ ಜಗದಿ ಸಂಸಾರವೆಂದೆಂದು
ಮುನಿಜನವು ಕವಿಗಣವು ಹಾಡಿ ಪಾಡಿದರಂದು,
ಋಣಮುಕ್ತ ಜೀವಽದ ಪಾಡನ್ನು ಹಾಡುತ್ತ; || ಕಂ ||

ಲೋಕವು ದಿನಕೊಂದು ರೂಪವ ಪಡೆವುದೊ,
ಸಾಕಿಽದ ಕೋಳಿಯು ಬೆಳೆಸಂತೆ ಬದಲಾಗೆ;
ಈ ಕರ್ಮ ಜಾಲಕ್ಕೆ ಪ್ರಾಣಗಳರ್ಪಿಸಿ— || ಕಂ ||

ಸಲ್ಲಲಿತ ಸುಖಶಾಂತಿ—ರಣರಂಗ ಭಯಕ್ರಾಂತಿ;
ಮಲ್ಲಳಿಯು ಇನಿವಾಡು—ಸಂಸಾರ ಒಳಪಾಡು,
ಬಲ್ಲವರ ವಿದ್ವತ್ತು—ಲೋಕನಾಶಕೆ ಹೇತು! || ಕಂ ||

---

## ೧೧ ಕನ್ನಡದ ಏಳಿಗೆ.

ಕನ್ನಡದ ಸಿಹಿನೀರ ನಾನೊಂದು ಬೊಗಸೆಯಲಿ
ಕುಡಿದು ನೋಡಿದೆನದರ ಸವಿಯನ್ನು ನಾನೊ;
ಕುಡಿಕುಡಿದು ಮುದವಾಂತು ನಲ್ಗಬ್ಬ ಸಾರವನು
ಬಾಯ್ದುದಿಯೊಳನವರತ ಇರಿಸಲೆಳಸಿದೆನೊ !

ಎಷ್ಟು ತತ್ವದ ಗೀತ? ಎಷ್ಟು ಮೋಹದ ಮಾತು?
ವಚನರಾಶಿಯ ಸಾರ, ಪುರಾಣಗಳ ಮೇಳ!
ಗದ್ಯ ಪದ್ಯದ ವಾದ, ಶರಣ ಹಾಡಿನ ನಾದ;
ಕನ್ನಡಾಂಬೆಯು ಕೊರಳ ಮುತ್ತುಮಣಿ ಮಾಲಾ-

ವೃತ್ತಕಂದಗಳೋಟ, ಚಂಪುಕಾವ್ಯದ ಕೂಟ,
'ಝೇಂಕರಿಪ ಷಟ್ಪದಿ'ಗಳಾ ವೇಗ ಮಾರ್ಗ;
ಶಾಸ್ತ್ರಗ್ರಂಥದ ಸಾಲು, ವ್ಯಾಕರಣಗಳ ಬಾಳು,
ಹಾಸು ಹೊಕ್ಕಾಗಿಯೇ ತಾಳಿ ಬಾಳಿದೆ ಕೇಳ!

ದಾಸ ಪದಗಳು ಹರಡಿ ಹಳ್ಳಿ ಜನಗಳು ಉಬ್ಬಿ
ಲಾವಣಿಗಳಾ ದನಿಯು ಇಂಪಿನಿಂ ಹಿಗ್ಗಿ;
ಹೊಸಕವನ ಕೊಳಲ ದನಿ, ಶ್ರೋತೃಗಳ ಬಿಲ್ಲದನಿ,
ಕನ್ನಡದ ಹಲತರದಲೇಳಿಗೆಯು ಸುಗ್ಗಿ !

ದಶವೂನ ಶತವಾಗಿ, ಶತವೂನ ದಶವಾಗಿ
ತಿಳಿನೀರ ಬುಗ್ಗೆಯುದು ಎಷ್ಟು ಸಿಹಿ ಚೆಲುವು!
ತಿಳಿಯುದಿಹ ಕವಿವರ್ಯರೆಸು ಜನ ಏತರದ
ಕನ್ನಡದ ತೋಟದಲಿ ಬೆಳೆಸಿದರು ಹೂವು!!

ಆಳಿದರು ಚೋಳ ಚಾಳುಕ್ಯ ಗಂಗ ಕದಂಬ
ವಿಜಯುನಗರದ ರಾಜ್ಯ ವೈಭವದ ಗೂಡು;
ನೃಪತುಂಗ ಪಂಪರೂ ಪೊನ್ನರನ್ನರ ತಂಡ
ಗುಣವರ್ಮ ಆ ಜನ್ನ ನಾಗಚಂದ್ರರ ದಂಡು.

ಲಕ್ಷಣವ ಸಾರಿದ ಸಾಳ್ವ ಭಟ್ಟಾಕಳಂಕರು
ಕೇಶಿರಾಜರದಂತು ನಾಗವರ್ಮರದೊ!
ತಾಯುಂದಿರಾ ಕಂತಿ ಅಕ್ಕದೇವಿಯುರಿಹರು
ಕನ್ನಡಿತಿ ಹೊನ್ನಮ್ಮ ಕವಿಕೋಕಿಲವಳೊ!

ಮಧ್ಯಯುುಗ ಬಸವಣ್ಣ ರಾಘವಾಂಕರ ಸಾಲು
ವ್ಯಾಸಕುವರನ ಒಂದು ಭಾಗತದ ಹಾಡೊ;
ಪದ್ಮರಸ ಲಕ್ಷ್ಮೀಶ ತಿಮ್ಮಕವಿ ಹರಿಹರರು
ಕವಿವರರು ಅಗಣಿತವೆ ಕನ್ನಡದ ಬಾಳೊ!

ಷಡಕ್ಷರಿಯು ಬಿರುನುಡಿಯು, ಮುದ್ದಣನ ಇನಿಮಾತು
ಕನಕಾಪುರಂದರರ ಲಲ್ಲೆ ಹಾಡಿನ ನುಣ್ಪು;
ಕೃಷ್ಣರಾಜರ ಸೇವೆ, ತಿರುಮಲಾರ್ಯರ ಸೊಲ್ಲು
ಒಡನಾಡಿ ಬಳೆಯಿತೊ ಕನ್ನಡದ ಹುರುಪು

ನೃಸಿಂಹ ಆಳಸಿಂಗರ ವಿದ್ವತ್ಸೇವೆಯು ಮೇರೆ
ಬಸಪ್ಪಶಾಸ್ತ್ರಿಗಳೊ ಪಂಜೇ ಶ್ರೀಕಂಠರು!
ಹಲವಾರು ನುಡಿಸೇವೆ ಸ್ಫೂರ್ತಿಯಿಕ್ಕಿದ ಜನವೆ
ಕಣ್ಮುಂದು ನಿಲ್ಲುವರು ಇನ್ನು ಬಾಳುವರು!

ಕನ್ನಡದ ಕರ್ಣಾಟಕಿಂದು ಅಂದಿನದಂತೆ
ಒಂದಾಗಿ ಇಲ್ಲವೆಂದೊಕ್ಕೊರಲ ಕೂಗು,
ಒಂದಾಪ ಸವಿಗನಸು ಕಾಣಲಿವೆ ಅದರಂತೆ
ನುಡಿಸೇವೆ ವೃಂದದಾ ಉತ್ಸುಕದ ದಂಡು!

ಮೈಸೂರು ಮಂಗ್ಳೂರು ಧಾರ್ವಾಡ ಎಂದೆಂದು
ಸೀಮೆ ಮಹತ್ವವನು ಕೊಟ್ಟು ಮೂಲೆಯೊಳಿರಿಸಿ,
ಕನ್ನಡಾಂಬೆಯು ಕುವರರಂದಿನಾ ಪ್ರಭೆಯೊಂದು
ಮಾಸಿಹೋಗಿದೆ ಇಂದು ಚೈತನ್ಯವಳಿಸಿ!

ಕವನಗಳ ಕಂತೆಗಳು, ಸಣ್ಣ ಕಥೆ ಬೊಂತೆಗಳು,
ಹಲಕಾದಂಬರಿಗಳೂ ತುಂಬುವುದು ಹಿತವೆ!
ಭಾಷಾಭಿಮಾನವೂ ಸ್ವಜನಾನುರಾಗವೂ
ಬಳೆಯುತ್ತಿವೆ ಜನರಲ್ಲಿ ಫಲಬಿಟ್ಟವೆ!!

*　　*　　*

ನನ್ನಿಚ್ಛೆ, ನನ್ನ ನಸು, ನನ್ನೊಲುಮೆ ಇದು ಒಂದು-
ಕನ್ನಡವು ಭಾರತದ ಹಸುಗೂಸಂತಿರದೆ;
ಮುನ್ನಡೆವ ಮುನ್ನೋಡ್ವ ಘನಭಾಷೆಯೆಂದೆನಿಸಿ
ಬಾಳಲೆಂಬುವ ಕಾಂಕ್ಷೆ ಮುನ್ನಿಟ್ಟು ನಡೆವೆ!

---

## ೧೨ ಸಮತಾವಾದ.

ಭೂಮಿಯು ಒಡೆತನ
ಒಬ್ಬನಿಗಾಗಲು
ಬಾಳಿನ ಬೇಗುದಿ ಒಬ್ಬನಿಗೆ
ಐಸಿರಿಯೊಬ್ಬಗೆ
ಶರಣಾಗಲು ಇಹ
ಲೋಕವೆ ಅಸಮತೆ ಬೀಡಹುದು.

ರಾಜನ ಸಂಪದ
ಸಿರಿವಂತನ ಗೆಲು
ನೋಡುತ ಸಾಸಿರ ಜನವೃಂದ
ಬೆರಗಲಿ ಕುಳಿತೂ
ತಮ್ಮಯ ಪಾಡನು
ನುಂಗುತ ಕರಗುತ ಕಳೆಯುತ್ತ.

ಸಾಹಸ ಬಾಳಿಗೆ
ದೈವಿಕ ಸುಖಕೆ
ಪಾತ್ರರು ಅಲ್ಲವೆ ಜನಕೋಟಿ?
ಕಲ್ಪಿತ ವ್ಯಸನಕೆ
ಮೂಡಿದ ಕರ್ಮಕೆ
ಅಂತ್ಯವು ಇಲ್ಲವೆ ಈ ಜಗದಿ?

ಋತುಗಳು, ಕಾಲವು
ಸೂರ್ಯನು, ಚಂದ್ರನು,
ಪ್ರಕೃತಿಯೆಲ್ಲವು ಸಮವಾಗಿ

ಕ್ರಿಮಿಯಿಂದೊಡಗಿದ
ವಿಶ್ವ ಸರ್ವಸ್ವಕೆ
ಒದಗಿದ ಸುಖವನು ಕ್ರಮವಾಗಿ–

ಈಯಲು ಮಾನವ–
ಗಣದಲಿ ಬಹುವಿಧ
ಏತಕೊ ಬಂದಿತು– ಎಲ್ಲಿಂದ?
ಅಸಮಾಧಾನದ
ಮನಸನು ಕೊರೆಯುವ
ಕೀಟವೆ ಇಂದಿನ ಈ ಭೇದ.

ಜನ ಸಮಾಜದಿ
ರಾಜನು ಋಷಿಗಳು
ರಕ್ಕಸ ಬಲ್ಲಿದ ಬಡವನೆಂದು
ರೂಪಿಗೆ ವರ್ಣಕೆ
ಹೋಲುವ ಸ್ಥಿತಿಯಲಿ
ಕೋಟ್ಯಾದಿ ವಿಧ ಜೀವನವು.

ರಷ್ಯಾದೇಶದ
ಭೀಕರ ಕ್ರಾಂತಿಯು
ಫ್ರಾನ್ಸಿನ ವಿಪ್ಲವದಾ ಪರಿಯು
ಹೆಬ್ಬುಲಿ ತನ್ನಯ
ಪ್ರಾಣಕೆ ಹಾರುವ
ತೆರವಿದೊ ಜೀವನದಗ್ರಪಿಷ್ಟಿ.

ದೇಶದ ಋಣವದು
ರಾಜನ ಹೊಟ್ಟೆಲಿ;
ಕಾಡದು ಬೇಡನ ಬಳಿಯಲ್ಲಿ.

ಬಡವನ ಕೈಗಳು
ಧನಿಕನ ಜೇಬಲಿ
ಕಾಳ್ಗಳು ಹೆಗ್ಗಣ ಬಿಲದಲ್ಲಿ.

ಸುಭಿಕ್ಷವಾದವ–
ದಿಲ್ಲದೆ ಲೋಕವು
ಅನ್ನದ ಸಮರವೆ– ಅನ್ಯಾಯ!
ಮಣ್ಣಿನ ಪಾಪವು
ಬ್ರಹ್ಮನ ನೀತಿಯು
ಸುಟ್ಟಂತಾಯಿತು ಈ ಇರವು.

ಹೇಳುವ ನೀತಿಗೆ
ಬಾಯಲಿ ಸ್ಥಾನವು
ಮಿನುಗುವ ಒಡವೆಗೆ ಬೆಲೆಯಿಲ್ಲ!
ಹೊನ್ನು ಹಣಗಳ
ಮೋಹಿಸಿ ನರಳದಿ–
ರೆನ್ನುವ ಹಾಡಿಗೆ ತಾಳವಿಲ್ಲ.

ಸಮತಾವಾದದ
ಕ್ರಾಂತಿಗೆ ಶರಣಾ–
ಗುವೆನಿದೊ ಮನ್ನಿಸಿ ಧರ್ಮವನು.
ಸಮತಾ ಭಾವವು
ಸಮಗುಣ ಐಕ್ಯವು
ಸರ್ವಜನ ಸುಖ ಬೆಳಗಲಿದೊ.

---

## ೧೩ ಭಗ್ನ ಹೃದಯ.

ತ್ರಿಪುರ ದಹನವದಾಯ್ತು ಲಂಕೆಯನು ಸುಟ್ಟಾಯ್ತು
ಎನಿತೆನಿತೊ ರಾಜ್ಯಗಳು ಭಸ್ಮವಾದೊ!
ಚಾರಿತ್ರ್ಯ ಲೇಖಕನ ಅಂಕೆಸಂಕೆಗಳೆಲ್ಲ
ತೋರವುವು ಭಸ್ಮಾಸುರ ಮಹತ್ವವ!!

ಯಾರ ಕಾಣಿಪುದೆಂತು, ಯಾರು ನೋಡುವರೆಂತು
ಬೆಂದ ಹೃದಯದ ತಾಪ–ಶೂಲಭೂತ!
ಜೀವಧಾರಣನಾತ ಭವ್ಯಜೀವಿಯು ನೋಡೆ
ಫಲಿತ ಫಲದೊಳಗಿರುವ ಹುಳದ ರೂಪ.

ಘೋರ ಕಾನನದಲ್ಲಿ ಪ್ರಕೃತಿ ದೇವಿಯ ವಾಸ,
ಸೊಗಸಿನಾಗರ, ಹಸುರು ಬೀಡು ಕಾಡು
ಕಾನನದ ನಡುದಾರಿ ಸರ್ಪಗಳ ಆವಾಸ
ಸೊಗಸು ಬನ ಹೃದಯದಾ ರೀತಿ ಎಂತೊ!

ರಾಜ ಬೀದಿಯು ನೋಡೆ, ಭವ್ಯ ಮಂದಿರ ಸಾಲು
ನಾಗರಿಕರಾಂತಂತ ದಳಿತ ಜನವೊ!
ಆದರೊಂದು ನಡುವಲ್ಲಿ ವಿಟಜನರ ವ್ಯವಹಾರ
ಕಟುಕರಲ್ಲಲ್ಲಿ ನೋಡೆ–ಸುಖವಿದೆಂತೊ!

ಮುಗುಳುನಗೆ ಮುಖದಲ್ಲಿ ಒಯ್ಯಾರ ತನುವಿನಲಿ
ಅಟ್ಟಹಾಸದ ನಡೆಯು, ತೇಜ ಪೂಜ್ಯ-
ತನ್ನೊಂದು ಭಗ್ನತೆಯ ಆತನಲ್ಲದೆ ಯಾರು
ಆಳಿದು ನೋಡಲು ಸಾಧ್ಯ—ತಿಳಿಯೆ ನಿಜವ!

ಎಲ್ಲರೆಲ್ಲರ ನೆಚ್ಚಿ ತನ್ನ ತನ್ನವರೆಂದು
ನಿರಾಶೆ ಜಾಲದ ಜಾಡ್ಯದೊಳ ನುಗ್ಗಿ ಬಗ್ಗಿ ;
ಭಗ್ನ ಹೃದಯದ ತಾಪ ಬೆಂದ ದೇಹದ ರೂಪ
ಯಾರೊಡನೆ ಪೇಳಲದೊ, ಕೇಳ್ವರಾರೊ?

---

# ೧೪ ಹರಿಯುವ ನೀರು.

ಯಾರ ಕಂಡು ಹೆದರಿ ಓಡುವೆ?
ಯಾರ ಹಿಡಿಯಲು ಸರ್‍ರ ಸಾಗುವೆ?
ಒಂದೆ ದಾರಿಯೊಳೆಂದು ನಡೆಯುವೆ–
ಎಲ್ಲಿ ನಿಲ್ಲುವಿ ಹೇಳೆಲೊ?

ಬೆಟ್ಟ ಅಗಲದ ದಾರಿ ಮಧ್ಯದಿ
ಕಡಿದ ಬಯಲಿನ ಹೊಂಡ ನಡುವಲಿ
ಕಂಡ ಕಂಡ ತಗ್ಗು ತಳದಲಿ–
ಎಲ್ಲಿ ಮುಂದಕೆ ಹರಿಯುವೇ?

ಹನಿಯು ಜಿನುಗಿಸಿ ಹುಟ್ಟಿ, ಮುಂದೂ
ಹರಿದು ಹರಿದೂ ತೊರೆಯು ಗಾತ್ರಕೆ
ಮುಂದೆ ಸಾಗಲು ಹೊಳೆಯೆ ಆಗುವೆ–
ಎಲ್ಲಿ ತನಕ ನೀ ಹರಿಯುವೆ?

ಕೊಚ್ಚಿ ಕೊಳಕನು ಪಚ್ಚೆ ಪೈರನು
ಕೊಚ್ಚಿ ಹರಿಯುವೆ ಮುಂಡಿ ಮರಗಳ
ಉಗ್ರರೂಪವ ಹೊಂದಿ ಹರಿಯುವಿ
ಹನಿಯು ಮಹಿಮೆಯಿದೆಂತುವೊ!

ಕಲ್ಲು ದಾರಿಲಿ ಮೆಲ್ಲೆ ಜಾರುತ
ಹೊಂಡ ತೋರಲು ಕಂಡು ಹಾರುತ
ತಿರುವು ಕಾಣಲು ತೋರಿ ತಾಳ್ಮೆಯು
ಹರಿವ ನೀರದು ನೋಡೆಲೊ!

ತಿರುಗಿ ಮುರುಗಿ ಹಾವಿನಂತೆ ನೀ
ಹಾರಿ ಜಾರೀ ಅಳಿಲ ರೂಪು ನೀ
ಕಾಡು ನಾಡೂ ಮಧ್ಯೆ ಹಾಯುವೆ;
ಯಾರ ಬೆದರದೆ ಸಾಗುವೆ

ಕಾಲಮಾನವ ಎನಿತು ನೋಡೆ ನೀ
ದಿನವು ರಾತ್ರಿಯೊ ಎಲ್ಲ ಸಮವದೊ,
ವಿಶ್ವ ನಿಯಮವ ಮೀರಿ ಹಾಯುವ
ನೀರು–ಮಾಯೆಯು ನೀರೆಯೆ!

ಹರಿದು ಹರಿದೂ ಎಲ್ಲಿ ನಿಲ್ಲುವೆ,
ಸಾಗರವೊ ನಿನ್ನ ಮೋಕ್ಷಲೋಕವು?
ನಂಬಲಾರೆನು; ಅದನು ಮೀರುವೆ
ಹರಿವ ನೀರೇ ತಿಳಿಸೆಯಾ?

ದೀನ ಮಾನವ ಜಪಿಸಿ ಚೆಲ್ಲಿದ
ಹೂವ ದಂಡೆಯು ಮುಡಿದು ಹರಿಯುವೆ;
ಗಂಗೆ ಪುತ್ರಿಯು ನೀನೆ ಅಲ್ಲವೆ?
ನೀನೆ ಜೀವವು ಲೋಕಕೆ!

---

# ೧೫ ಒಂದು ಸ್ವಪ್ನ.

ಸ್ವಪ್ನರಾಜ್ಯದ ಭಾವದೋಜೆಯು
ನಡುವೆ ನಡೆದೆನು ತೆಪ್ಪಗೆ,
ಮನೋಭೂಮಿಯನುತ್ತು ಅಗಿಯಿತು
ತೇಜಪೂರಿತ ಘಟನೆಯು!
ಮೆತ್ತಗಾಸಿದ ತಲ್ಪತಳವೇ
ನನ್ನ ಯಾತ್ರೆಯ ಭೂಮಿಯು!!

ಮೇಲೆ ಭಾನುವು ಬಿಳಿಯ ಮುಗಿಲು
ಕೆಳಗೆ ಕೊರಕಲು ದಾರಿಯು;
ಹಾದು ನಡೆದೆನು ಏಳುಬೀಳುತ
ಏರಿದೆನು ಗಿರಿ ಮೇಲಕೆ!
ಬೆಟ್ಟತಪ್ಪಲು ಜಾರುಕಲ್ಗಳು
ಬೀಳುವೆನೊ ಎಂಬೆದರಿಕೆ!!

ಅಮರಲೋಕದ ಹೂವುತೋಟದ
ನೆನಪು ಸುಳಿಯಿತು ಮನದಲಿ
ಮುಂದವೂರುತ ಎತ್ತಿತಂದಾ
ಅಮರ ಗಾನವ ಕೇಳಿದೆ,
ಕೇಳಪೋದೆನು—ಶೂನ್ಯಲೋಕವು
ಗಾಳಿ, ಗಿರಿದುದಿ, ಮರಗಳೆ!

ಐಂದ್ರಜಾಲಿಕ ದೃಶ್ಯದಂತೆಯೆ
ಬೆಟ್ಟಗವಿಯಿಂ ಪಕ್ಕನೆ
ಇಂಪುಗಾನದ ದನಿಯು ಅಲೆಯೊಳು
ತನ್ನ ರೂಪನು ಸೇರಿಸಿ

ಬಂದಳೊರ್ವಳು ಇಂದುವದನೆಯು
ಇಂದು ರೂಪವ ಹಳಿಯಿಸಿ.

ಸುಳಿದಳೀಚೆಗೆ ಬೆಟ್ಟದುದಿಯಲಿ
ನಿಂತ ನಾನು ನನ್ನನು!
ಮರೆತು ನೋಡಿದೆ ವಿಶ್ವನಿರ್ಮಿತ
ಮಾಯೆ ರೂಪವ ನೆನೆದೆನೊ;
ರೂಪ ನೋಡುತ ನೀಲ ಬಾನಿನ
ಸ್ವಚ್ಛ ಶೀಲವ ಹಳಿದೆನೊ!

ಹೆರಳ ಕುರುಳು ಮುಡಿಯ ಮುಗುಳು
ಕಾಂತಿ ಬೀರುವ ಕಂಗಳು
ಬಾಲೆ ಸದ್ಗುಣೆ ಹಂಸಯಾನೆಯು
ಜಾಣೆ ನೋಟಕೆ–ಕನ್ನೆಯು
ಒಂಟಿಸರವನು ರತ್ನಮಾಲೆಯ
ಕಟ್ಟಿ ನೂಪುರ ರನ್ನೆಯು!

ನೋಡಿ ಹಿಗ್ಗಿದೆ ವನವು ಗಾಳಿಯು
ಹಿಗ್ಗಿತೆನ್ನೊಡೆ ಬೀಸುತ
ದೂರ ಸರಿದುವು ಸುತ್ತು ಸೇರಿದ
ಹಕ್ಕಿಮಿಗಗಳು ಭ್ರಮರವು;
ಒಬ್ಬನಾದೆನು ಮುಂದೆ ಸರಿದೆನು
ಪೋದ ಧೈರ್ಯವ ಕರೆದೆನು!

ಹೂವು ಎಲೆಗಳು ಎಲ್ಲಿ ಅಣಕಿಪು–
ವೆಂದು ನಾಚುಗೆಪಟ್ಟನೊ!
ಗಿರಿಯ ಮೇಲ್ಗಡೆ ಚೆನ್ನಕಾಣುವ
ಮುಗಿಲು ನಗುವುದೊ ಎಂದು ನಾ

ಭಾವಿಸುತ್ತಲಿ, 'ಯಾರ ನೋಡುವಿ'
ಎಂದು ಕೇಳಿದೆನವಳನು.

'ಯಾರ ಇಲ್ಲವು ಹಣ್ಣು ಹೂಗಳ-
ನಾಯ್ದು ಪೋಗಲು ಬಂದೆನೊ!
ಕಂಡು ಸೋತೆನು ಮನವು ಬಿಮ್ಮನೆ
ಎನ್ನ ನಿಲಿಸಿತು-ಇಲ್ಲಿಯೆ'
ಎಂದು ಹೇಳಲು, 'ರಮಣಿ ಹೆದರದಿ
ರೆಂದು ಪಕ್ಕದಲಿರುತೆನೊ!

ಸರಸವಾಟದಲೊತ್ತು ಕಳೆಯುತ
ಮಾತುಮಾತಲಿ ಮುಳುಗುತ;
ನೋಟ ಬಿಂಬಾಧರವ ಹೊಕ್ಕಿತು,
ಕಣ್ಣು ಕಣ್ಣನು ನುಂಗಿತು!
ದೃಷ್ಟಿ ಹೊರಳಿತು-ತನುವು ಕೊಂಕಿತು;
ಕೈಯು ಎದೆಯಲಿ ನುಸುಳಿತು!!

ಮುದ್ದು ಮಾತಿನ ಮುದ್ರೆ ಕೆನ್ನೆಲಿ,
ಅಭಯ ಸೂಚನೆ ಬಾಯಲಿ-
ಜಾಣೆ ನಾಚುತಲಂಜಿ ಅಪ್ಪಿತು,
ಬಿಗಿದ ಅಪ್ಪಿಗೆ ಸುಖದಲಿ
ಇರಲು-ಪಾಪೀ ನಿದ್ದೆ ವಂಚನೆ
ಮಾಡಿ ಕೆಡಿಸಿತು ಸುಖವನು!!!

---

## ೧೬ ನೇತಾಜಿ.

ಆರ್ಯಭೂಮಿಯ ಕಾಂತಿ ಮಾಸುತಿರೆ ದಿನ ದಿನಕೆ,
ಶತಮಾನ ಹಲವಾರು ಕಂಗೆಟ್ಟು ದಾಸ್ಯದಲಿ
ಕೊಳೆಯುತಿರೆ ಜನವೆಲ್ಲ ತಮ್ಮೊಂದು ಆತ್ಮಾಭಿ-
ಮಾನವನು ಘನತೆಯನು ವೀರ್ಯವನು ಶಕ್ತಿಯನು
ಕಳೆದುಳಿದು ಮೋಸದಾ ದ್ರೋಹದಾ ಉದರದಾ
ಹೇಡಿತನದಾ ಒಂದು ಕ್ಷುದ್ರಬಾಳನು ಕಳೆಯೆ,-
ಭಾರತಿಯೆ ಈ ಸ್ಥಿತಿಗೆ ನಾಚಿದಳು, ಬಾಗಿದಳು;
ಅಸಹಾಯಳಾದಳೀ ಕೋಟಿ ಮಕ್ಕಳು ಸಹಿತ!

ಸಿಡಿದುರಿದು ಹಾರಿದನು ವಂಗದೇಶದ ವೀರ
ಜನ್ಮಭೂಮಿಯ ಬದುಕ ಬವಣೆಯನು ನೋಡುತಲಿ!
ಸಾಮ್ರಾಜ್ಯವಾದಗಳ ಉಕ್ಕುಗೋಡೆಯ ಮುರಿದು
ಸರ್ವಮತಸೇನೆಯನು 'ಜೈಹಿಂದ್' ಮಂತ್ರವನು
ಆಸೇತುವಿಂದೊಗೆದ ದೇಶದಲಿ ಬಿತ್ತಿದನು.
ಅದೃಶ್ಯನಾದನಾ ಸಿಂಹ! ಸುಭಾಷ್ ಧನ್ಯನು ಹೌದು!!

---

# ೧೭ ಜೀವನ ಸಮಸ್ಯೆ.

ಮನದ ಕಾಂಕ್ಷೆ ಒಲವಿನೆಣಿಕೆ ಆಳ ಆಳೆದು
ನೋಡಲಾರೆ,
ವಿಶ್ವವ್ಯಾಪಿ ಎಮ್ಮ ಮುದವು ನಿಲ್ವುದೆಲ್ಲಿ
ಎಣಿಸಲಾರೆ !
ಕತ್ತಲಂತೆ ಸುತ್ತಲೆಲ್ಲ ಮನಕೆ ಭಾರ
ದೇಹಸರ್ವ
ತಿಂಬುದೆಲ್ಲ ಅರುಚಿ ಕೇಳು, ಯಾರ ಇದುರು
ಪೇಳ್ವುದಲ್ಲ ! !
ಮಂಜುಗಟ್ಟಿ ನೇತ್ರದ್ವಯವು ಬೆಂದಮನವ
ಸೂಚಿಸುವುದು,
ಶ್ರಮದ ಸಾರ ಸಾಮ್ಯಗಳನು ಮೂಲೆಗಟ್ಟಿ
ತಿಳಿಯದಹರು !
ಕಾಣೆ ನಿಂತ ಎಣಿಸಿದಾಶೆ, ಕಾಣೆ ನಾವೆ
ವಿದಿತಕಾಂಕ್ಷೆ
ನಾವೆ ನಮಗೆ ಮೇಲೆಂದೆನಿಸಿ ಬೀಳುತಿಹೆವು
ದಾಸ್ಯ ಬಲೆಗೆ !
ಅಹೋ ನೊಂದ ಲೋಕಯೆಲ್ಲ ಎಂತೊ ಎಲ್ಲೊ
ಸಾಗುತಿಹುದು
ಅಹಾ ನಾನು ಹನಿಯ ತೆರದಿ ವಿಧಿಯ ತೆರೆಯ–
ಲುಕ್ಕುತಿಹೆನು.

ಬೆಳೆದು ಬಂದೆ ಜನವನರಿತೆ ಕೇಂಪು ಕಪ್ಪಿ
ನಷ್ಟುಭೇದ
ಒಂದರಂತೆ ಒಂದು ಇಲ್ಲ, ವೃಕದ ಬಳಿಯು
ಕುರಿಯು ತೆರವೆ!
ಬದುಕಿನೆಣಿಕೆಯಿಂದ ಕ್ರಿಮಿಯು ಸಾಗುತಿಹುದ:
ದೇಹಪೊತ್ತು
ಜ್ಞಾನಜ್ಯೋತಿ ಹೊತ್ತುತ್ತಿರುವ ನರನ ರೀತಿ
ಭೀತಿ ಎಂತು?
ಕಂಡುದೆಲ್ಲ ಕಲ್ಲಿನಷ್ಟು ಗಟ್ಟಿಯೆಂದು
ತೋರ್ಪುದಹುದು,
ಎನ್ನ ಇರದ ತೆರವು ಮಾತ್ರ ಹಿಮದ ತೆರದಿ
ಗೋಚರಿಪುದು;
ಭಾವನೆಗಳಾ ಕೂಪದಲ್ಲಿ ಹೊರಳಿ ಹೊರಳಿ
ಎದ್ದುನೋಡೆ,
ನೊಂದ ಮನ, ನಿರಾಶೆ ಜಾಲಮಯುವ ನೊಂದೆ
ತೋರುತಿಹುದು.
ಹಣದ ಬರವು ತಣಿಸದೆಮ್ಮ; ಸುಖದ ಸೋಗು
ನಶಿಸದೆಮ್ಮ;
ಆದರೂ ಆನಂದಕ್ಕೊಂದು ದಿವ್ಯ ರತ್ನ
ತೃಪ್ತಿಬೇಕು!

---

# ೧೮ ಶ್ರೀರಾಮನ ಜನನ.

ಅಯೋಧ್ಯೆ ರಾಜ್ಯದಲಿ ಇನಕುಲದ ಖ್ಯಾತಿಯಲಿ
ಧರ್ಮಾಭಿಮಾನದಲಿ ಬಾಳಿದನು ನೋಡಾ.
ದಶರಥನೆಂದಾತನೀ ನೃಪ ಶ್ರೇಷ್ಠನೆಂಬಂತೆ
ಪಾಲಿಸುತ ದೇಶವನು ಆಳಿದನು ಕೇಳಾ.

ರಾಜಾಧಿರಾಜನೂ ಭುವನೈಕ ವಂದ್ಯನೂ
ಸಿರಿಲೋಲ ಮಾನ್ಯನೂ ರವಿಕುಲದ ಪ್ರಭುವು;
ಎಂದೆನಿಸಿ ತ್ರಿಪತ್ನಿಯೆಂದೆಸೆದ ರಾಜನಿಗೆ
ಪುತ್ರಸುಖ ಸಲಿಸದಿಹ ಕೊರತೆಯಿದು ನಿಜವು!

ಪ್ರಾರ್ಥಿಸುತ ಧೀರಸುತ ಮೊರೆಯಿಡುತಲತಿಶಯದಿ
ಪೊಂದಿದನೆ? ತೊಡಗಿದನು ಪುತ್ರಕಾಮೇಷ್ಟಿ ;
ಆಚರಣೆಗೆಂದೆಂದು ಋಷಿವರರ ಕರೆಯಿಸುತ
ದಶರಥನು ಸುರಿಸಿದನು ಬೇಡಿಕೆಯ ವೃಷ್ಟಿ !

ಆನಂದ ಸಂಸಾರ, ಸತ್ಪುತ್ರ ಶುಭಹಾರ–
ದಿಂದೆಸೆವ ಭಾಗ್ಯವದು ಇಲ್ಲದಿರೆ ಏಕೆ,
ರಾಜ್ಯಸಿರಿ ಜನಗಣವು ಲೋಕಾಧಿಕಾರಗಳು ?
ಈ ಜಗಕೆ ವ್ಯರ್ಥವದು ಸಂದೇಹವೇಕೆ !

ಪುತ್ರಕಾಮೇಷ್ಟಿಯಿಂ ಪ್ರಸನ್ನನಾದನದೊ
ಸಂತುಷ್ಟನಾದ ಆ ದೇವತೆಯು ಅಗ್ನಿ–
ನಗುಮುಖದೆ ಒಲಿದೊಲಿದು ಹೋಮಾಗ್ನಿಯಿಂ ಹಾಮು
ಹರಸಿದನು ರಾಜನನು ತಲೆಯನ್ನು ಮುಟ್ಟಿ !

ಕೊಟ್ಟನದೊ ಪಾಯಸವ ಪ್ರಸಾದ ರೂಪದಲಿ
ಕೊಟ್ಟು ಮರೆಯಾದನಾ ಮಿಂಚಿನಂತಲ್ಲಿಂ;
ಇತ್ತ ನೃಪ ಸತಿಯರಿಗೆ ತ್ರಿಭಾಗವನ್ನೆಸಗಿ
ಮೂವರೊಳು ಹಂಚಿದನು ಬಹುಪ್ರೇಮ ಮುದದಿಂ.

ಹಿರಿರಾಣಿ ಕೌಸಲ್ಯೆ ಹಿರಿದಾಗಿ ಗರ್ಭವನು
ತಳೆದಳಾ ದಿನದಿನಕೆ ಹಿಗ್ಗಿಗ್ಗಿ–ಅಂತೆ !
ಹರಿವಂಶೋದ್ಧಾರಕನ ಹಡೆಯುವಾ ಲಕ್ಷಣವ
ಮುದವಾಂತು ಪೊಂದಿದಳು ಶ್ರೀದೇವಿಯಂತೆ !

---

## ೧೯ ಕುಣಿತದ ಧ್ವನಿತ.

ತಟಪಟ ತಟ್ಟುತ ಒಟ್ಟನಲಿ
ಕೋಲಿಂ ಕೆಲವರು ಹೊಲದಲ್ಲಿ,
ಕಿಣಿಕಿಣಿ ಮಣಿಯಿಂ ಕುಣಿಸುತಲಿ,
ಗಲಗಲ ಬಾಲರ ಒಲಿಸುತಲಿ.

ಡಂ ಢಂ ಡಾಂಬರ ಗಡಗಡಿಸಿ
ಪೆಂಪಾಪೆಂಪೆಂದು ಪೇಳಿರಿಸಿ,
ಲಲ್ಲಾಲ್ಲೆನ್ನುತ ಸೊಲ್ಲನೊಂದು
ಬಾಯೊಳು ಸಾಯುಲು ಹಾತೊರೆದು!

ರನ್ನದ ಚಿನ್ನದ ಬಣ್ಣಗಳು,
ಹೊಳಪಿನ ಸುಲಲಿತ ಈ ಕಲೆಯು,
ಸೋಜಿಗದುಜ್ಜಿದ ಗೆಜ್ಜೆಯನು
ಕಾಲಲಿ ಸಾಲಲಿ ಠಣಠಣಿಸಿ!

ಆಚೆಂದೀಚೆಗೆ ಹಾಯುತಲಿ;
ಆನಂದದಾಡುತ ಹಾರುತಲಿ;
ಬಗ್ಗುತ ಏಳುತ ತಿರುಹುತಲು,
ಸಾಲಿಂ ಕೋಲ್ಗಳ ಕಟಕಟಿಸಿ.

ಸುಗ್ಗಿಯಲಗ್ಗದ ಸಗ್ಗವಿದು
ಒಗ್ಗುವ ಒಮ್ಮನದೊಲುಮೆಯಿದು;
ತಾಳದ ಗಣಗಣ ಪ್ರತಿಧ್ವನಿಯು,
ಮಾನಸಿಕಾಂಕ್ಷೆಯ ಸಿರಿಯೊಲವು.

ಕುಣಿಕುಣಿ ಕುಲುಕುತ ಅಂಗಗಳು
ಥಕಥಕ ತಟ್ಟುತ ಪಾರುತಲಿ,
ಕೂಟದೊಳಾಟದ ಪರನವಿದು
ಉತ್ಸವದಾಡಲು ಸಿರಿಸುರಿಯುಂ!

ಬಯಲಿನ ನಡುವಣ ಕುಣಿಬನವೂ,
ಚಿವರಿನ ದಣಿಮಣಿ ಚಿನ್ಮಣಿಯುಂ,
ನೋಡಲದಚ್ಚರಿ! ನಿಟ್ಟಿಸುತ
ಆಡುವ ಬಗೆ–ಗೆಲು ಹುಟ್ಟಿಸುತ!

# ೨೦. ಕವಿಯ ಮನಸ್ಸು.

ಏಳುಲೋಕಗಳೇಳು ಕಡಲಲಿ
ಏಳು ಪರ್ವತ ಬಾನಲಿ
ಏಳು ಸಾವಿರ ದೇಶದಿ,
ಸುತ್ತಿ ಹಾರ್ವುದು ನೋಡಿ ನಡೆವುದು
ನಿಮಿಷ ನಿಮಿಷಕೆ ಕ್ಷಣದಲಿ
ಕವಿಯ ಮನಸ್ಸದೊ ಹಾರ್ವುದು!

ಚಂದ್ರಲೋಕದ ಸುತ್ತು ತಿರುಗುತ
ಸೂರ್ಯಕಾಂತಿಯ ನೋಡಿತು!
ವಿಶ್ವಗೋಳವ ತಿರುಗಿಸಿ–
ಪಾತಾಳದಾಳಕೆ ಕೊರೆದು ನುಗ್ಗುತ
ಯಾವ ಜ್ಞಾನಿಯು ಹೇಳದ,
ವಿಶ್ವರೂಪವ ಹಾಡಿತು!

ಮೊರೆವ ತುಂಬಿಯ ತೆರದಲಿಂತಿದೊ
ಇಲ್ಲಿ ಅಲ್ಲಿ ಹಾರುತ
ಕವಿಯ ಮನಸನು ಬಾಯಲಿ,
ಗಗನದಾಡುವ ಲೋಕ ಗುಟ್ಟನು
ಕಂಡು ಹಿಡಿಯುತ ಹಾರುತ
ದೇವ ಸತ್ಯವ ಹೇಳುತ.

ಗಂಗೆ ಬಂದಾ, ಸ್ವರ್ಗ ಸೇರಿದ
ಕಾವೇರಿ ಕುಂಡಿಕೆ ಮಹಿಮೆಯು
ಯಮುನೆ ತೀರ್ಥ ಶಕ್ತಿಯು

ದೇವ ರಾಕ್ಷಸ ಸಮರ ಸರ್ವವು
ರಾಮ ರಾವಣ ರಾಜ್ಯದ
ಕೂಸು ಕೃಷ್ಣನ ಬೀರ್ಯವ

ಯಾವ ಜ್ಞಾನಿಯು ಕಂಡು ಪೇಳಿದೊ–
ಕವಿಯ ಮನಸ್ಸೊಂದಲ್ಲದೆ
ಅವನ ಲಿಖಿತವದಲ್ಲದೆ,
ಕಾಳಿದಾಸನ ಕ್ಷೀರ ಸಾಮ್ಯದ
ಉಕ್ತಿ ಮರೆಯಲಿ ಎಂತು ನಾ ?
ಸ್ತುತಿಸದಿರ್ಪುದು ಎಂತುವೊ ?

ಸೂಜಿ ಮೊದಲಿಂ ವಿಶ್ವದಂತ್ಯಕು
ವಿಷಯ ಸರ್ವಸ ಹಾಡಿದರ್,
ಹಾಡದಿರುವುದು ಯಾವುದೊ ?
ಕವಿಯ ಮನಸದು ವಿದ್ಯುತ್ ಶಕ್ತಿಯು
ಗತಿಯ ಮೀರಿದೆ–ದಾಟಿದೆ
ವಿಶ್ವಭೇಧಿಸಿ ಸಾಗಿದೆ.

ಕವಿಯೊ ತನ್ನ ಸೂಕ್ಷ್ಮವಾದದಿ
ಕ್ರಾಂತಿ ಸಾರಿದ ರಾಜ್ಯಕೆ
ಶಾಂತಿ ನೀಡಿದ ದೇಶಕೆ;
ಜಗದ ಎಲ್ಲಾ ಅಲ್ಲಸಲ್ಲದ
ವ್ಯಾಜ್ಯ ಸಮರಕೆ ಮೂಲವೊ
ಕವಿಯ ನಿರ್ಭಯ ಮನಸ್ಸದೊ !

ಮಧುವ ಜಿಹ್ವೆಯಲಿಟ್ಟ ತೆರದಲಿ
ದೇವ ಕವಿಗಳ ಹಾಡದು,
ಗಾನರಸದಲಿ ತೇಲಿಸಿ,

ಜ್ಞಾನ ಶಕ್ತಿಯು ವಿಶ್ವ ಗುಟ್ಟನು
ಎರಡು ಕೈಯಿಂ ತಟ್ಟುತ
ಪೇಳ್ವ ಹಾಡದೊ, ಆಹಹಾ !

ಮಂತ್ರ ಋಷಿಗಳ ಪ್ಲೇಟೊ ಬರೆಹವು
ವಿಲ್ಸನ್ ಸಾರಿದ ಮೂಕತೆ,
ವೇದ ಮಂತ್ರವು ಕವಿಮತ;
ವಾಲ್ಮೀಕಿ ಹೋಮರ್ ಗಯಟೆ ವ್ಯಾಸನು
ಷೇಕ್ಸ್‌ಪೀಯರ್ ಡಾಂಟೆಯೊ
ದೇವ ಕವಿಗಳೊ ಲೋಕದಿ.

ಸೂರೆಮಾಡಿತು ಲೋಕ ಮನಸನು
ಕವಿಯು ಮಂತ್ರದ ಕ್ರಾಂತಿಯೊ
ರಂಗು ರಂಗದೊ ಚಿತ್ತಾರ–
ಕ್ಷೀರ ಶರ್ಕರಾ ಬೆರೆಸಿ ಸವಿಯುವ
ತೆರದೆ ವಾಣಿಯು–ಅಮೃತ
ಬಂದ ಮನಸ್ಸು–ಸರಸ್ವತಿ !

ಅನ್ನ ನೀರೂ ಬಿಟ್ಟು ಬಾಳ್ವೆನೊ
ಹಾಡಾನಂದವ ಪಡೆಯುವ
ಭಾಗ್ಯ ಎಂತು ನಾ ಬಿಡುವೆನೊ ?
ಬಾಳಲೀ ಕವಿ ಮಾತ್ಮರೆಲ್ಲ
ಚಿರಾಯುವಿಂದಲಿ ಲೋಕದಿ !
ಅಗ್ನಿಯಂತೆಯೆ ಸತ್ಯದಿ !!

---

## ೨೧ ವಿರಹಿಣಿಯ ಸಂತಾಪ.

ಚಂದ್ರಮುಖಿಯು ನೀನು ಎಂದು, ಬೆಡಗುಗಾರ್ತಿ ಚೆಲುವೆಯೆಂದು
ಸಂದ ಜೀವದಾತ್ಮ ಗೊಂಬೆಯೆಂದು ಪೇಳ್ದಳಿ–
ಇಂದು ತರವೆ ಇನಿಯ ಇನಿತು ಕೊರಗಿಸುವುದೊ !

ನೀರೆ ನೀನೆ ಶೂರೆ ಎಂದು ಎನ್ನ ಮೋಹ ಕಲಶವೆಂದು
ಸಾರಿ ಸರಸಿ ತೀರದಲ್ಲಿ ಚೆನ್ನು ಮುತ್ತು–
ಮೀರಿದೊಂದಾನಂದದಿತ್ತು–ಎಲ್ಲಿ ಪೋಽದೆ ?

ಊರದೇವರಬ್ಬದಲ್ಲಿ ಬೆಳ್ದಿಂಗಳಾ ಆಟದಲ್ಲಿ
ಸೇರಿದವರು ಈ ದಂಪತಿಗಳಾರು–ಎಂದು,
ಸಾರಿನೋಡಿ ನಾಚಿ ನಡೆದುದನ್ನು ನೆನೆಯೆಯೊ ?

ಅಂದು ಪತ್ರದಲ್ಲಿ ನೀನು ಬಣ್ಣನೆಗಳ ಶಬ್ದಜಾಲ–
ದಿಂದ ಕರೆದು ಬರುವ ಸುಖದ ಕನಸ ಕಂಡು
ನೊಂದ ನನ್ನ ವಂಚಿಸುವುದು–ನಿನಗೆ ತರಽವೆ ?

ಬಡವರೊಲಿವ ನಲ್ಮೆ ಜೀವ ನೈಜ ಸುಖದ ರೂಪು ಅಲ್ಲ–?
ಬಡಿದು ಬಾಳ ಭಾಗ್ಯವನ್ನು ದ್ರೋಹದಿಂದ–
ಪಡೆವ ಅಲ್ಪ ಹುಸಿಯ ಸುಖದ ಕೆಚ್ಚು ಏಽಕೆ ?

ಮೂಡುವೆಟ್ಟ ಹತ್ತುವಾಗ ಸೋಗೆ ಕೇಕೆ ಹಾಕುವಾಗ
ಕಾಡಸೊಬಗು ನೋಡಿ ದಣಿದು ಸೇರಿದಾಗ
ಕೂಡಿ ಬಿಡಿಸಿ ಲೋಕ ಸುಖನ ಪೇಳಿದೆಽಲ್ಲಿ ?

ಮೊಸರು ಕಡೆದು ಬೆಣ್ಣೆ ತೂಗೆ, ಕಂದ ಜೋ ಜೊ ಲಾಲಿ ಹಾಡೆ
ಹಸಲೆ ಹುಲ್ಲ ಕುಯ್ಯುವಾಗ್ಗೆ ಹಾಡಿದೇನೊ ?–
ಹೊಸತು ಜೋಡಿ ಜೀವ ಸುಖವ ಮರೆತೆಯೇನೊ ?

ಕೊಲ್ಲಿಗದ್ದೆ ಅರುವಿಗಾಗಿ, ಹೊನಲು ಹರಿವ ಬಯಲಿಗಾಗ
ಬಳ್ಳಿ ಮನೆಯ ಕಟ್ಟಿ ನಲಿವ–ಕಾಡು ಸುಽತ್ತಿ
ಮಲ್ಲಳಿಗಳ ಹಾಡ ಕೇಳಿ ನಡೆವ ಬಾಽರೊ !

ಸೂಜಿದಾರ ಹೊತ್ತು ಹೊತ್ತು ಹೊರುವ ಭಾರ ಅದೇ ಆಯ್ತು !
ಜಾಜಿ ಕೋದು ಯಾರ ಕೊರಳಲಿರಿಸಲೆಂದು
ಸೋಜಿಗದಲಿ ನೆನೆದು ನೆನೆದು—ಸೊರಗಿದೆ ನಾ !

ಬಾವಿ ನೀರ ಸೇದುವಾಗ ಎಸರ ಬೇಯ್ಸಿ ತೆಗೆಯುವಾಗ
ಕವಿದ ಮಂಕ ಕಣ್ಣಿನಿಂದ ಒರಸುವಾಗಽ
ಜೀವಿಗಳ ಈ ಹುಸಿಯು ಬಾಳ ನೆನೆವೆ ನಾಽನೊ !

ನಗುತಲಿರು ನೀ, ನಗುವಿನಲ್ಲಿ ಬಾಳ ಸತ್ಯ ಮೂಡಿ ಬರಲಿ–
ಒಗುವ ಸತ್ಯ ನಲುಮೆಯೆಲ್ಲ–ಒಲುಮೆಯಲ್ಲಿ
ಸೊಗವನೀಕ್ಷಿಸುತಲೆ ಬರಲಿ–ಆಹಾ ಕಾಽಯೋ !

ಸೂರ್ಯ ಕಾಂತಿ ಬೀಳ್ವ ಮುನ್ನ, ಚಂದ್ರ ಬೆಳಕು ತೋರ್ವ ಮುನ್ನ,
ಕಾರ್ಯಲೋಕ ಶಾಂತಿ ತಲ್ಪ ಸೇರ್ವ ಮುಽನ್ನ–
ಭಾರ್ಯ ದುಃಖವಳಿಸೆ, ಪ್ರಿಯಾ–ಬಂದು ಸೇಽರೊ !

---

## ೨೨ ಜೀವದ ಒಳಗುಟ್ಟು.

ಕರ್ಮದ ಬಾಳಿಗೆ ಮಣ್ಣಿಟ್ಟು
ನೋಡಿದೆ ಜೀವದ ಒಳಗುಟ್ಟು !

ಧರ್ಮಕೆ ಕಸಿಯನು ನಾ ಮಾಡಿ
ತಿಂದೆನೊ ಪಾಪದ ಹಣ್ಣು ಇಡಿ;

ಮೂಡಲ ಸೂರ್ಯನು ಅಲ್ಲಿರನು
ಮನುಜನು ಬುದ್ಧಿಯ ತಾಳಿರನು !

ಗಂಟೆಯ ಮುಳ್ಳದು ತಿರುಗಾಡಿ
ಲೋಕಕೆ ಕಲಿಪುದು ಬಲುಮೋಡಿ.

ಸುತ್ತಲು ಮಂಜಿನ ನೆನೆಹನಿ
ಕಣ್ಣಲಿ ಪಾಡಿನ ಮಂಕು ಹನಿ !

ಹೊಂಡವೆ ನೀರಿನ ಸದ್ಯ ನೆಲೆ,
ಲೋಕ ದಾರಿದ್ರ್ಯದ ಕಟ್ಟುಬಲೆ;

ಜೀವನ ಜಿದ್ದಿನ ಜೀಕಲಿನ
ಆಶ್ರಯವಾಗಿದೆ–ಆದೆ ಮಲಿನ !

ಪಾಪಿಯ ನಗುವಿನ ಕಹಿ ಗೆಲುವು
ಯಾರ ಹೃದಯಕೆ ಎಸೆದುಗುಳು ?

ಪುಷ್ಪದ ಎಸಳಿನ ಆ ಸೊಗವು
ಮೋಹಿನಿ ತೋರಿದ ಆ ಸೊಬಗು–

ಅಂಗೈ ತೋರಿದ ಭಾಗ್ಯವದು
ಎಲ್ಲಿವರೆಗದು– ಅದೆ ನೆನವು !

ಸೂಜಿಯು ಹೊರುವುದು ದಾರವನು
ಇರುವೆಯು ಹೊರುವುದು ಕಾಳನ್ನು,

ಮರಗಳು ಹೊರುವುವು ಹಣ್ಣನ್ನು
ಮಾನವ ಹೊರುವನು ಪಾಪವನು !

ನಾಯಿಗೆ ನಾಯ್ಗಳು ವೈರಿಗಳು ,
ಜನಗಳು ಜನಕೆ ಮೊನೆಮುಳ್ಳು !

ರಕ್ತದ ದಾಹವೆ ಹೃದಯದಲು,
ಕಾಮಿಯ ವಾಣಿಯ ಉಸುರಿನಲು;

ಸತ್ತರು ಮರೆಯರು ಲೋಭವನು,
ಮತ್ಸರ ಬಾಳಿನ ದರ್ಪವನು,

ಮೀನಿಗೆ ಮೀನೇ ಸವಿಯೂಟ
ಸೋದರ ವಧೆಯೋ ನರನಾಟ!

ವಿದ್ಯೆಯು ದ್ರೋಹಿಯ ಮಂಕಾಟ,
ಬಡವನ ವಂಚಿಪ ಹುಸಿಮಾಟ!

ತಿನ್ನುವ ಕಾಳದು ಕರುಳಿನಲಿ
ಉರುಳ್ವದು ಮೋಹದ ರಾಟೆಯಲಿ.

ಆದರಿಂ ಸೂರ್ಯನು, ಚಂದ್ರನನು
ವಂಚಿಪ ಬಾಳಿನ ತಿರುಳನ್ನು,

ನೋಡುತ ಪೋಗ್ವುದೆ-ಈ ಮಾಯ ,
ಮಾಯ ಪ್ರಪಂಚದ ಅಧಿಮಾಯ !

---

## ೨೩ ಸೂರ್ಯಾಸ್ತಮಾನ ಸಮಯ.

ಪಡುವಣ ದಿಗಂತದಲಿ ಅಗ್ನಿದೇವನ ಒಂದು
ಕಾಲ್ಚೆಂಡು-ಮೇಲ್ಹಾರಿ ಕೆಳಬೀಳ್ವುದೊ !
ಬ್ರಹ್ಮಗಿರಿ ಎಂದೆಂಬ ಬೆಟ್ಟದಾ ಅರುಗಾಗಿ
ದಿನಕರನು ಇಣಿಕಿಣಿಕಿ ಮರೆಸೇರ್ವನೊ !

ಎಲ್ಲಿಂದ ಯಾವೆಡೆಗೆ ? ಯಾವೂರು ಪೋಗ್ವನೊ
ಅಗ್ನಿಯಾ ಚೆಂಡು ಈ ಕೆಂಬಣ್ಣದೀ;
ಪಡುವಣದ ಪ್ರಾಂತದಲಿ ನೀರು ನೆಲದಲಿ ಎಲ್ಲ
ರಂಗು ಕುಂಕುಮ ಚೆಲ್ಲಿ-ಮುನ್ನೋಡ್ವನು !

ಜೀವ ರಾಶಿಗಳೆಲ್ಲ ಗೂಡು ಸೇರುವ ಪೊಳ್ತು
ಏಳು ವರ್ಣದ ಬಿಲ್ಲು ನಡುಗೋಲಿಯೊ !
ಹಾರಿ ಬಿದ್ದಿತು ಅಲ್ಲಿ, ಪಾಕಡಾಚೆಲಿ ನೋಡು,
ದೇವ ನಾವೆಯು ಒಳಗೆ ತೇಲಿ ಪೋಪಂ !

ತುಳುನಾಡ ಸಂಪಾಜೆ ಘಾಟಿ ದಾಟುತ ಹಾರ್ವ
ಪಕ್ಷಿಗಳೊ ಕೂಹೂಹು ಕೂಗಿ ಎಲ್ಲ;
ತಪ್ಪಲಿನ ಬಯಲಿನಲಿ ದುಡಿದು ಹಾಡುತ ಪೋಪರ್
ಕಿನಕಾಪು ನೀರಿ ಬೀಸಿ ಹೆಂಗಳೆಲ್ಲ !

 

ದನವು ಕರಗಳು ಎಲ್ಲ ಮೇಕೇರಿ ಬಯಲಿನಲಿ
ಕರೆ ಕರೆದು ಸೇರಿದವು ಕೊಟ್ಟಿಗೆಯನು;
ಕೋಟಿ ಗಂಟೆಯೊ ಆರು ಬಡಿಯೆ ಸೇರಿದರೆಲ್ಲ
ಆಡುತಿಹ ಮಕ್ಕಳೂ ಮನೆ ಸೇರಲು.

ಸಂಜೆ ಸಮಯವೊ ನೋಡು, ತಂಪುಗಾಳಿಯು ಸುತ್ತು,
ಬಾನ್ಕರೆಯಲೊಂದು ಮಗು ಅಳುತಲಿಹುದು,
ತನ್ನ ಮುಗುಳ್ನಗೆಯನ್ನು ಮುದ್ದು ಮಾತುಗಳನ್ನು
ತೋರಿ, ತಾಸಿನ ಕಾಲ ಬಾಳಿ ಇಲ್ಲಿ!

ಬೆಳಕಿನಲಿ ಸುಖವಿಹುದು, ಅದು ಲೋಕನ್ಯಾಯ,
ರಾತ್ರಿ ಕಷ್ಟದ ನಂಟು, ಶೋಕ ಮೂಲ;
ಅಗಲಬೇಡ ನೀ, ಬೇಡ ಸೂರ್ಯದೇವ
ನೋಡಲಾರೆನು ನೀನು ಅಗಲ್ವ ದೆಮ್ಮ!

ಸೃಷ್ಟಿ ಚಿತ್ರವ ಜಗಕೆ ತೋರಿ ನೀ ಮಿಗಿಲಿಂ
ಯಾವ ನಾಡೊಳು ಪೋಗಿ ನಿದ್ರಿಸುವಿಯೊ?
ಕಾಡು ಮೂಡನು ಎಲ್ಲ, ಗುಡ್ಡ ಬಯಲಲಿ ಮಲೆಯೊಳ್
ಹೊಂಬೆಳಕ ಚಿಮುಕಿಸುತ ಪೋಪೆ ಎಲ್ಲಿ?

---

## ೨೪. ಕಲ್ಲು ಹೋಯಿತು - ಹಣ್ಣಿಲ್ಲ !

ಮಾಮರದ ಕೊನರೆಲೆ ಅಂಚಿನಲಿ ಮಿನುಗುವ
ಸಿಹಿಮಾವು ಒಂದು ನೋಡಿ,
ಕಣ್ಣರಳಿ ಮನವುರುಳಿ ತನ್ನಲ್ಲಿ ಚಿಂತಿಸಿತು–
ಬೀಳಿಸಲೆ ಬೇಕು ಎಂದು!

ಮರ ಏರಿ ಇನಿವಣ್ಣ ಕೈಯ್ಯಾರೆ ತರಲೆಂದು
ಯೋಚಿಸಿದೆ ತಲೆಯನೆತ್ತಿ;
ಬೆಳೆದಿತ್ತು ಎತ್ತರಕೆ ತೆಂಗು ಕೌಂಗನು ಮೀರಿ
ನೋಡಿದೆ ನಿರಾಶನಾದೆ!

ಅಹೊ ನೋಡು ತನಿವಣ್ಣು ಹಸುರಳಿದು ಬೆಳೆಸಾಗಿ
ಕಾಣುವುದು ತೂಗಿ ಮೇಲೆ,
ಹಾರೆನೋ ಅದು ಸಾಗ! ನಾನೊರ್ವ ಅಳಿಮನುಜ
ಜೊಲ್ಲರಿಸಿ ನೋಡಿದೆ ನಾ!

ಭೂರಸ ಸತ್ವವನ್ನಡಗಿಸಿ ಹೆಮ್ಮೆಯಿಂ
ಜೋಲುತಿಹೆ ಮಾವೆ ನೀನು;
ನೆನೆದೊಡೇಂ ನಿನ್ನನೂ ದರ್ಪದಲಿ ಇರಿತಾಗ
ಹಣ್ಗಳಾ 'ಮೊಂವ'–ಎಂದು!

ನೋಡ್ನೋಡಿ ಬೆಂಡಾಗಿ ಕರತಲದಿ ಕಲ್ಲ್ಬರು
ಒಂದಿಡಿದು ಪೇಳ್ದೆ ನಾನು,
ಎಲೆ ಕಲ್ಲೆ, ನೀ ಹಾರಿ ನುಣುಪಾದ ಆ ಹಣ್ಣ
ತಾರೊ ನೀ ಅಂತೆ ನೀನು!

ನೋವಿಗ್ಗೀವು ಮಾಡ್ಬೇಡ, ರಭಸದಿ ಹೊಡಿಬೇಡ
ತೆಳ್ದೊಗಲು ಸುಲಿಯುಬೇಡ;
ನನಗಾಗಿ ಹಣ್ಣಿಡಿದ ಇಳಿಕೊಂಬೆಯನು ತಾಗಿ
ಬೀಳಿಸೆಲೊ ಹಣ್ಣ ನೀನು!

ಇದೊ ನಾನು ಕಾಯುವೆನು, ಹಿಡಿದಪ್ಪಿಕೊಳ್ಳುವೆನು,
ನಿನಗಂತು ಋಣಿಯು—ಎಂದು
ಬೀಸಿದೆ ನಾ ಕೈಯ್ಯನ್ನು ಹಾರಿಸಿದೆ ಕಲ್ಲನ್ನು
ನೋಡಿದೆನು—ಆ ಹಣ್ಣನ್ನು!

ಅಯ್ಯಯ್ಯೊ ಕಲ್ಲೋಯ್ತು, ಹಣ್ಣಲ್ಲೆ ಇರಿತುಂಟು—
ಬೆಪ್ಪನೇ—ನಾನಾದೆನೊ!
ಅಳಿಮನದ ಹಿರಿಯಾಸೆ—ಕರತಲದ ಕಲ್ಮಣಿಯು
ಕಳಕೊಂಡ ದೀನ ನಾನು!

ಹಣ ದೋ ದರ್ಪದಲಿ ಅಣಕಿಪುದು ನನ್ನೋಡಿ,
ತೂಗುತಿಹುದದೊ ನೋಡು!

ಸಿಗಲಾರೆ—ಎಂದು ಅದು ಕೊನರೆಲೆ ಮಧ್ಯದಲಿ
ತಲೆ ಅಲ್ಲಾಡಿಸುತಲಿಹುದು

ಸಾಹಸದ ಸಂಕಲ್ಪದವಸಾನ ಇಷ್ಟರಲಿ
ಕಲ್ಲೋಯ್ತು—ಹಣ್ಣಿಲ್ಲ!
ಹಿರಿದಾದ ಆಶೆಯದು ಜಾರುವುದು—ವಿಧಿನಿಯಮ,
ಯತ್ನದಾ ಮೆಟ್ಟಿಲಿಂದ!!

ಚಂದಿರನ ಹಿಡಿಯಲು ಕೈಲಾಸ ಆಳಲು
ಲೋಕಗಳ ಸುತ್ತಲೆಂದು,
ಹುಸಿಯೂಸೆ ರತ್ನಗಳ ತಾಗ್ಯೆವ ಯತ್ನದಲಿ
ಬೆರಸ್ಯಲು—ಆಗದೇನು?

ಜ್ಞಾನಿಗಳ ಆ ನೀತಿ, ಋಷಿಗಳ ಆ ಸೂಕ್ತಿ
ಗಳಿಗೆ ನಾ ಶರಣು ಇಂದು!
ಮರಳಿ ಯತ್ನವ ಮೂಡಿ, ಮರಳಿ ಸಾಧಿಸು—ಎಂದು
ಪೇಳಲದೊ ಶರಣಾದೆನು!!

---

## ೨೫ ತಪೋಭೂಮಿ-ಭಾರತ ವರ್ಷ.

ಧನ್ಯಭೂಮಿ—
ಮಾನ್ಯರೂಪೀ, ಕನ್ಯೆಭಾರತಿಪುಣ್ಯೆಯೇ!
ಏಸುಕಾಲದಿ
ಮಾಸದಳಿಯದೆ ಕೋಶಸಲಹಿದೆ–ತಾಯಿಯೆ?

ಆರ್ಯಮೊಗಲರ
ವೀರ್ಯತೇಜರ ಶೌರ್ಯದಿಂದಲಿ ಸಲಹಿದೆ–
ರಾಶಿಜನಗಣ
ಆಶ್ರಯಾ ನಿನ್ನ ಲೇಸು ಪಡೆದರು–ಅಲ್ಲವೇ?

ನೆನೆವೆ ಅಂದಿನ
ಮುನಿಜನ ಮನ, ನಿನ್ನ ವೈಭವ–ವೈಭವ!
ವೇದ ಭೂಮಿಯು–
ಬೋಧದಾಶ್ರಮ–ವಿದುಷಿ ನೀನೇ ಸ್ಫೂರ್ತಿಯು!

ಕರ್ಮಭೂಮಿ
ಧರ್ಮಯಾತ್ರಾ ಮರ್ಮದಿಂದಲಿ ಮಾಡಿದೆ
ಗೀತೆ ಭಾರತ
ಮಾತೆ ವೇದದ ಜಾತೆ ನೀನೇ–ಭಾರತೇ!

ನೆನೆವೆ ಬುದ್ಧನ
ಧಣಿದಶೋಕನ, ಮಣಿವೆ ಸಾವಿರ ಮಾತ್ಮಗೆ
ತಪೋಭೂಮಿ
ರೂಪುಗೊಳಿಸು ಶಪಿಸಿದಿಂದಿನ ಸ್ಥಿತಿಯನು!

ಆ ರಾಮ ಕೃಷ್ಣರ
ಶೂರ ಗಾಂಧಿಯ ಪರಮ ಹಂಸರ ಕಂಡೆನೊ;
ಅಮಿತ ದೇಶಾ-
ಭಿಮಾನ ವಾದವ ಸಾಮವಾದದಿ ತೋರಿಸಿ.

ಇಂದು ನಾಳೆಯು
ಮುಂದು ಮುಂದಕು ಸಂದಾಹಿಂಸಾ ರೂಪವ
ಸತ್ಯ ಧರ್ಮದ
ಕೇತು ಹಾರಿಸಿ, ನರ್ತಿಸು-ಎಲೊ ಭಾರತಿ!

ಸ್ಥೈರ್ಯ ಧೈರ್ಯವು
ಸೂರ್ಯಕಾಂತಿಯು ಬೀರ್ಯವಿೂರುತ ಬೆಳಗಲಿ,
ಅಮರ ಲೋಕದ
ಸಾಮಗಾನವ ಧರ್ಮರೂಪಿಣಿ-ಹಾಡೆಲೊ!

---

## ೨೬ ರಾಜಾಸನದ ಕಟ್ಟೆಯ ಮೇಗಲಿ—

ಮಡಿಕೇರೀ ಮಲೆ ಸೃಷ್ಟಿಯ ಕೋಮಲೆ
ಸುತ್ತಲು ಗಿರಿಸಾಲು.
ಬಯಲಿನ ತಪ್ಪಲು ನಿರ್ಝರ ದರಿಗಳು
ನಿಡು ಮರ ಗಿಡ ಸಾಲು,
ಸೃಷ್ಟಿಯ ರಮ್ಯ ಸೌಂದರ್ಯಗಳು

ದೃಷ್ಟಿಯೆ ಬೀಳದ ಆಳದೊಳೆಲ್ಲಿಯು
ಹಚ್ಚನೆ ಹೊಲಸಾಲು
ಸುತ್ತು ದಿಗಂತವ ಅಪ್ಪುತ ನಿಂತಿಹ
ನುಣ್ಣನೆ ಬೆಟ್ಟಗಳು,
ಸುತ್ತಲು ಹಬ್ಬಿದ ಬನಹಸುರು.

ತಪ್ಪಲ ಸಾಸುವಲಾಯ್ತವು ದನಗಳು
ಅಂಬಾ—ಅನ್ನುತಲಿ—
ಇನಿವಣ್ ಮೆಲುತಲಿ ಮಿಗಮಿರಿ ಗಿರಿಯಿಂ
ಪೊದರೊಳು ಸೇರಿದವು
ಸಂಜೆ ವಿಶ್ರಾಂತಿಯ ಹೊಂದುವವು.

ಪಡುವಣ ಮಾರುತದೊಂದಿಗೆ ಹಾರುವ
ಚಿಲಿಪಿಲಿ ಹಕ್ಕಿಗಳು
ಕಣಿವೆಯಿಂದೊಯ್ಯನೆ ಬೆಳೆದಾ ಮರಗಳ
ಗೂಡಿನಲೊರಗುವವು
ಪೀಂ ಪೀಂ ಹಾಡಿನ ತಾಳಗಳು.

ತಪ್ಪಲ ನಿರ್ಝರ ಸುಂದರ ಸುಮಂಕರ
ದೃಶ್ಯದ ರೂಪವದೊ–
ಕಾಳಾಹಿಯು ತೆರ ಬಳಸೋಡುವ ಹಲ
ರಸ್ತೆಗಳದೊ–ಓಟ
ಬತ್ತದ ತೆನೆಗಳ ಗೆಲು ನೋಟ!

ಪಶ್ಚಿಮ ವಾರಿಧಿ ಸ್ನಾನವನೆಸಗಲು
ರವಿಯಿದೊ ಇಳಿಯುವನು,
ಕೆಂಗದಿರುಗಳನು ಬಾನ್ ಬಯಲೆಲ್ಲ
ಪಸರಿಸಿ ಇಳಿಯುವನು
ಸಂಜೆಯು ಸೂರ್ಯನು ಮುಳುಗುವನು

ರಾಜಾಸನದಾ ಕಟ್ಟೆಯ ಮೇಗಲಿ–
ಕೇರಿಯ ತರುಣಿಯರು
ರಮ ರಮ ಝಮ ಜಿಮ ಸಂವಾದಗಳಾ
ಲೀಲೆಯೊಳ್ ಮುಳುಗಿದರು
ಮರೆತರು ಸುತ್ತಲ ಲೋಕವನು.

ಹಕ್ಕಿಗಳಾಡೂ ಚಂದಿರನುದಯವು
ಗುಂಯ್ ಗುಂಯ್ ತುಂಬಿಗಳಾ
ಚಂಚಲ ಕರೆಯಲಿ, ಕೇಳಿಯ ಮರುಳಲಿ,
ಮನೋಲ್ಲಾಸದಲಿ–
ಕಾಮನ ವಾರ್ತಾ ವಿಷಯದಲಿ.

ತೆಂಬೆಲರೊಯ್ಯನೆ ತಣ್ಣನೆ ಬೀಸಲು
ಕುಣಿದವು ಕುರುಳುಗಳು–

ಮೊಲೆಕಟ್ಟುಡುಪೂ ಹಿನ್ನಿರಿ ಕುಂಚ್ಚೂ
ಜರಿ ವಸ್ತ್ರ ತೊಟ್ಟು—
ಮಿನುಗಿತು ಕುಂಕುಮದಾ ಬೊಟ್ಟು.

ಚಿಣಿಕಣಿ ಬಳೆಗಳು ಝಲ್ ಜಲ್ ನೂಪುರ
ರತ್ನದ ಒಂಟಿಸರ
ತೂಗುವ ಜುಂಕಿಗಳೋಲೆಯನಾಡಿಸಿ
ಕುಲುಕುವರಾ ತಲೆಯ—
ಎದೆ ಮೇಲಿರಿಸುವರಾ ಜಡೆಯ!

ಆಚೆಂದೀಚೆಗೆ ಸರಸದಲಾಡುತ
ಘಮ ಘಮ ಹೂಗಳನು—
ಕೋಲಿಂ ಬೀಳಿಸಿ 'ತ್ರೇರೆ ಶಿವಾ'ಡುತ—
ಪೋಣಿಸಿದರು ಮಾಲೆ—
ಸಂಪಿಗೆ ಜಾಜಿಗಳೂಮಾಲೆ!

ಕೆಂಪಡೊ ಬಾನೂ ಮುಗಿಲೋಳಿಗಳೂ
ವರಿಸುವೆನವನೆನುತ—
ತಂತಮ್ಮ ಕೊರಳೊಳು ಹಾಕುತ ಮಾಲೆಯ
ಕೈಪರೆಯೂಟದಲಿ—
ನಾಚುವರವರೇ ಗೇಲಿಯಲಿ.

ಸೂರ್ಯನ ಕಾಂತಿಯು ನೀಲಾಕಾಶದಿಂ—
ದೆಲ್ಲಿಯೊ ಹರಿದೋಯ್ತು!
ನಿರ್ಜನ ಭೂಮಿಯುದಾಯಿತು—ಸರಿದರು
ಉಳಿಸುತ ಕತ್ತಲನು
ಅನುಭವಿಸುತಲೀ ಹರುಷವನು!

———

## ೨೭ ನಮ್ಮ ಕಾಳಗದ ಕೊನೆ !

ಬೆಳಗಾಯ್ತು ಬದುಕಿದೆ ಸೂರ್ಯಕಾಂತಿಯು ಕಂಡೆ
ಆಲಸ್ಯ ಹರಿದೋಯ್ತು !
ಕಂಬನಿ ಆರಿತು, ವೈನಡುಕ ಓಡ್ಹೋತು !
ತನುಸ್ವಾಸ್ಥ್ಯವುಳಿಯಿತು ‖ ಬೆಳ ‖

ಜನ ಜನವ ತರಿತರಿದು ಕಿರುಕರುಳ ತಿವಿತಿವಿದು
ಕೆಂಗಣ್ಣು ಕಿಡಿಕಾರಿ,
ಹಿಂದೂ ಇಸ್ಲಾಂಗಳು ದ್ವಂದ್ವಕಾಳಗ ಹೂಡಿ
ಸೌಹಾರ್ದತೆಗೆ ಬೇಡಿ-
ಆದುಯೇಸು ಕಾಲದಿಂ ತನುಸವೆದು ದಣಿದಣಿದು
ಪಡೆದ್ವರೊ ಈ ರಾಜ್ಯ;
ಪರಜನವ ಪರರಾಜ್ಯಕ್ಕೋಡಿಸಿ ಪಡೆದೊಂದು
ಸ್ವಾರಾಜ್ಯಕೀ ವ್ಯಾಜ್ಯ ! ‖ ಬೆಳ ‖

ಹುಲ್ನೆಲ ಚಿಗುರೆಲ್ಲ ಗಿಡಕಾಡು ಕೊನರೆಲ್ಲ
ಹಸುರಾಂತ ಪೈರೆಲ್ಲ,
ನೊಂದು ಬೇಗುದಿಗೊಂಡು ಇಬ್ಬನಿಯೊಡೆ ತಾವು
ಅತ್ತವು ಹನಿಸೂಸಿ;
ಭಾರತಿ ಕಣ್ಣೀರೆ-ಸಹಸ್ರಾರು ಹೆಂಗ್ಸಳ
ಅಶ್ರುಮಯೂ ಧಾರೆ,
ಮಾರ್ಜಾಲ ನೀತಿಯೆ ! ಮತಧರ್ಮ ಭ್ರಾಂತಿಯೆ !
ಲೋಭವು ಜಗವಾಳೆ!! ‖ ಬೆಳ ‖

---

## ೨೮ ಜಾರಿಹೋದ ಉಂಗುರಕೆ.

ನಮ್ಮ ಪ್ರೇಮದ ದಾರಿ ಕೊರಕಲನು ಸಮವಾಗಿ,
ದೂರವನು ಹತ್ತಿರಿಸಿ—
ಸಂದ ಭಾಗ್ಯದ ಚೆನ್ನುಗನಸನ್ನು ನೆನೆಸನ್ನು
ತೋರಿದುಂಗುರವ ಕಳೆದೆ!

ಸಂಜೆ ತಾರೆಯು ನೋಡಿ ಆದರ ಕಾಂತಿಯು ಹಳಿದ
ಸರಸಿ ಉಂಗುರವವಳು;
ಮೊಲ್ಲೆ ಮಲ್ಲಿಗೆ ವರ್ಣದೀಪ್ತಿಯನು ತಾಕಂಡು
ಮುಡಿಯಲೆಂದಳು ನನಗೆ!

ರಮಣನಂದೆನಗಿತ್ತ ಅಂದಿನಾ ದಿನದಿಂದ
ನನ್ನೊಡನಾಡಿ ಅವಳು,
ಪತಿಭವನ ವಾರ್ತೆಯನು ಪತಿಯೊಲುಮೆ ತೆರವನ್ನು
ಅಂದವಳವಳೆ ನನಗೆ!

ಕ್ಷಣಕ್ಷಣಕು ದಿನದಿನಕು ಉಂಗುರದ ಸ್ಪರ್ಶವೇ
ನನ್ನ ಪ್ರೇಮದ ಹರುಷ
ಹೃದಯ ಸಾಮಿಪ್ಯವನು ಪ್ರಣಯ ಸಾರೂಪ್ಯವನು
ತೋರಿತದು–ಅಹಾ ಎಲ್ಲಿ?

ಕೆರೆಯಲ್ಲಿ ಕೈತೊಳೆಯೆ ಅದು ನಕ್ಕು ಹೊಳೆಹೊಳೆದು
ನನ್ನ ಮುತ್ತನ್ನು ಕೊಂಡು—

ನಿನ್ನ ರಮಣನ ಪ್ರೇಮ ಸಾಕ್ಷ್ಯ ರೂಪಿಯೆ ನಾನು–
ಎಂದು ಗೇಲಿಯನು ಮಾಡಿ.

ಕೈಯ ನೀರೊಳಗಿಡಲು–ಅದರ ಹೊಳಪನು ನೋಡಿ
ಬರಲು ಬೆರಗಿಂ ಮೀಂಗಳು,
ಮುಗ್ಧೆ ಶಕುಂತಲೆಯ ಉಂಗುರವ ಕದ್ದಂತೆ
ಸಿಗಲಾರೆ–ತಾನು ಎಂದು.

ಓಡಿಸುತ ಮೀಂಗಳನು–ಪ್ರೇಮಪುರಿ ದಾರಿಯನು
ತೋರುವೆನು–ಅಂದಿತೆನಗೆ.
ಬೆರಳ ನಡುವಲಿ ಸಿಲುಕಿ ಓಡಲಾರೆನು, ಮೋಡಿ
ವಿದ್ಯೆಯೂ ಗಾಡಿ–ಎಂದು.

ಪ್ರೇಮವಾರ್ತೆಯ ದೂತಿ, ನಲ್ಮೆ ಕಾಯುವ ದಾಸಿ
ಮಾಯವಾದಳೇ ಇಂದು?
ಜಗದ ಪ್ರೇಮಿಗಳ ಹೃತ್ಕಮಲಗಳ ಹೆಣೆಯುತಿಹ
ಮಾಯ ಮುದ್ರಾ ಸ್ವರೂಪಿ!

---

# ೨೯ ಹನುಮಂತನ ಜನನ.

ಶ್ರೀರಾಮ ಶ್ರೀರಾಮ ಶ್ರೀರಾಮ ನಾಮವನು
ವಿಂದ್ಯಾದ್ರಿ ಗಿರಿದುದಿಯ ಮೇಲಿನಿಂದುರಿಸಿ;
ಸಾನಂದ ಸಂಸ್ಕಾರ ಸಾಯುಜ್ಯವನ್ನಿತ್ತ
ಶ್ರೀರಾಮ ಭೃತ್ಯನೀ ಮಂಡಲದಿ ಹಾರಿ.

ಹಾರಾರಿ ಲೋಕದಾ ಜನದೊಡೆಯ ರಾಮನಾ
ಸೇವೆಯನು ಪೂಜೆಯನು ಧ್ಯಾನವನು ಸದಾ;
ಧ್ಯಾನದಾ ಬೀಜವನು ಆ ಸೇತು ಹಿಮಗಿರಿಯ
ನಡುಭೂಮಿಯೆಡೆ ಬಿತ್ತಿ ಧನ್ಯನವನಾದ!

ಸೂಸಿಬಹ ತಣ್ಣೆಲರ, ಸುರುಳಾಯ್ವ ಬಿರುಗಾಳಿ
ಮಧ್ಯೆ ಶ್ರೀರಾಮ ರಾಮೆಂಬ ಧ್ವನಿ ಕೇಳಿ;
ಪೂರ್ವಾಪರ ದಡಬಡೆವ ಸಾಗರದ ತೆರೆಗಳೂ
ಶ್ರೀರಾಮ ಎಂದೆನುತ ಘೋಷಿಪುದು ಉರುಳಿ!

ಪುಣ್ಯೆ ಶ್ರೀ ತಾಯಮ್ಮ ಭೂರಮೆಯ ಪ್ರಿಯಸುತೆ,
ಈ ನಮ್ಮ ಭಾರತಿಯು ಆ ಧ್ವನಿಯ ಕೇಳಿ
ವಾಯುಸುತ ಹಾರಾಡಿ ಚೆಲ್ಲಾಡಿದಾ ಮಂತ್ರ
ಇದೊ ಕುವರ ಕೋಟಿಗಳೆ ಕಲಿಯಿರೆಂದುಸುರೆ!

ಕಿಷ್ಕಿಂಧ ನಗರದಲ್ಲಿ ಕಿರಿದಾದ ಜನ್ಮದಲಿ
ವಾನರನ ರೂಪದಲಿ ಶ್ರೀದೇವ ಮಾಯೆ;
ಅವತಾರ ಲೀಲೆಯಲಿ ದಾಶರಥಿ ಸುತ್ತಾಡೆ
ದಂಡಕಾರಣ್ಯದಲಿ ಜಗಜನರಕಾಯೆ!

ಕಪಿವೀರ ಕುಂಜರನು ಮುದ್ದಾಡಿದೆಳೆಪಸುಳೆ
ವಾನರನ ಕುಲಪೂತೆಯೆಂತೆಸೆದು ಕುವರಿ,
ಅಂಜನಾದೇವಿ ಶ್ರೀ ರಮಣಿಯೆಂತಾಡುತಲಿ
ಕೇಸರಿಯ ಸರಿಸತಿಯೆಂದೆನಿಸಿದಳು ಮುದದಿ !

ವೀರ ಸ್ತ್ರೀ ಅಂಜನಿಯು ಕೇಸರಿಯ ಪ್ರಿಯ ಪತ್ನಿ
ಪುತ್ರ ಸುಖ ಹೊಂದಲೆಂದೆಲ್ಲ ಜನರಂತೆ,
ಮರುಮರುಗಿ ಕಟ್ಟಕಡೆ ಬ್ರಹ್ಮನಂ ಮೊರೆಯಿಡಲು
ಗಿರಿವನಕೆ ಸಾಗಿದಳು ಘೋರ ತಪಕೆಂದೆ.

ವೃಷಭಾಚಲಾಗ್ರದಲಿ ಪತಿಯಾಜ್ಞೆ ಪಂಥದಲಿ
ತಪವೆಸಗಿ, ಸತ್ಪುತ್ರ ಮಾತೆಯೆಂದೆನಿಸೆ—
ಅಂಜನಿ–ನಿರಾಹಾರ, ಜಲಪಾನ, ಏಕಪದ,
ಉಂಗುಷ್ಠ ಮಾತ್ರದಲಿ ನಿಲ್ಲುತಲಿ ತಪಕೆ !

ಧ್ಯಾನದಲಿ ಏಳುಸಾವಿರ ವರ್ಷ ಕಳೆಯುತಲಿ
ಲೋಕದಲಿ ಶಾಂತಿಯದು ಇಲ್ಲದಿರೆ ಕಡೆಗೆ
ಪರಮಾತ್ಮ ಶಂಕರನೆ ತಾನ್ಬಂದು ಓಡೋಡಿ
ಅಂಜನಿಯ ಮೊರೆಯನ್ನು ಸ್ಮರಿಸಿದನು ನಿಜದೆ.

ಸಾಹಸದ ಚಿಚ್ಛಕ್ತಿ ದೃಢವ್ರತದ ಮಹಿಮೆಯು
ಸ್ತ್ರೀಯೊಳಿಹ ಮೌನ ಪ್ರತಿಜ್ಞೆ ಪ್ರಭಾವ—
ಜನಗಣಕೆ ಹರಿಮುನಿಕೆ ಯೋಗಿ ಜನಭಾವಕೆ
ಆಚ್ಚರಿಯವಡಿಸಿದವು ಅಂಜನಿಯ ಸ್ಥೈರ್ಯ !

ಮನನೊಂದು ಬಹುಮೆಚ್ಚಿ ದೇವಾಧಿಪಾ ವಾಯು
ನಿಜರೂಪಿಂದಂಜನಿಗೆ 'ತನ್ನ ಬಲವೀರ್ಯ

ತೇಜಸ್ಸು ಮುಂತಾಗಿ ಇರುವ ವರ ಕುವರನನು
ಪಡೆ'ಯೆಂದು ವರವಿತ್ತು ಪೋದ ಸಖ ಸೂರ್ಯ.

'ಬಾ ಎನ್ನ ಶಂಕರನೆ, ಶ್ರೀಲೋಲ ಶ್ರೀಕರನೆ!
ಬಾ ಎನ್ನ ಮೂರುತಿಯೆ' ಎಂದು ಮೊರೆಯಿಟ್ಟು!
'ಮಗನನ್ನು ಮಡಿಲಲ್ಲಿ ಮಮತೆಯಲಿ ಮುದ್ದಿಸುವ
ಭಾಗ್ಯವೆನಗಿಡು'ಯೆಂದು ಮೊರೆದು ಮತಿಗೆಟ್ಟು.

ವರುಷವನು ಕ್ಷಣದಂತೆ ಕಳೆಯುತಿರೆ ಬಂದನದೊ
'ಭೋ'ವೆಂದು ಬೊಬ್ಬಿಡುತ ಶಂಕರನೆ ಬಳಿಗೆ
ಏಳೇಳು ನಿಂತಿರುವೆ, ಸನ್ನಿಧಿಗೆ ಬಂದಿರುವೆ
ಬೇಡು ನೀ ಬೇಕಾದ ವರಗಳನು ಮುದದೆ.

ಅರೆತೆರೆದ ಕಣ್ಣನ್ನು ಕೆದರಿರಿತ ವೇಣಿಯನು
ಜೋಲುಮೊಗ ಜೋಡು ಕೈ ಎಲ್ಲವನು ಸಮದೆ;
ಸರಿಪಡಿಸಿ ತಲೆಬಾಗಿ 'ನಮೋ'ಯೆಂದೆನ್ನುತಲಿ
ಅಂಜನಿಯು ಪ್ರಸನ್ನ ಮುಖಿಯಾಗಿ ಶಿವಗೆ! –

ಬಗ್ಗಿದಳು, ಕಂಬನಿಯ ಸುರಿಸಿದಳು, ಮುದದಿಂದ
ಹಿಗ್ಗಿದಳು, ಮನದಲ್ಲಿ ಬೆದರಿದಳು ನೋಡೆ;
'ಹೇ ಶಿವಾ, ಶಂಕರಾ, ಹರಹರಾ, ಗಿರಿಜೆವರ!
ಬಂದೆಯಾ? ನಿಂತೆಯಾ? ರೂಪವನು ತೋರ್ದೆ'!

'ಕೇಳೇಕಾದಶರುದ್ರ ವಜ್ರದೇಹಿಯ ತೆರದಿ
ಬೆದರನಾರಿಗು ಜಗದಿ, ರಕ್ಕಸರಿಗೂ;
ಹುಟ್ಟುವಳು ಧನ್ಯಳಿಹೆ, ನೀಕೊರಗದಿರುವಿದಕೆ
ಘೋರತಪ ಕೊನೆಗೊಳಿಸು, ಬೆದರದಿರು ಹೋಗು'!

‘ಕೇಳಿನ್ನ ಪ್ರಿಯಸುತೆ, ಕೂತಿರೇ ಧ್ಯಾನದಲಿ
ದೃಢಮನದಿ, ನಿಜತಪದಿ, ಘನವಾದಿಯಾಗಿ;
ಕಣ್ಣೆರಡು ಮುಚ್ಚಿಡುತ, ಬೋಗಸೆಯನ್ನೊಡ್ಡಿಡುತ
ಧಾನ್ಯಸ್ಥಳಾಗುನೀ ದೈನ್ಯಮತಿಯಾಗಿ.’

ಎಂದು ಸುತನುದಯದಾ ನಂಬುಗೆಯ ಬೀಜವನು
ಅಂಜನಿಯ ಸಮ್ಮುಖದೊಳಿಡುತ ಈಶ್ವರನು
ಥಟ್ಟನರೆ ಕ್ಷಣದೊಳಗೆ ಮಿಂಚಿ ಮರೆಯಾದನಾ
ಶಂಕರನು ಸಾನಂದ ಸುಖವೀಯುವವನು !

ಯೋಗಾಸನದಿ ನಿದ್ರೆ, ಬೊಗಸೆ ಬೇಡಿಕೆ ಮುದ್ರೆ –
ಯಿಂದ ಪರಮಾನಂದ ಶ್ರದ್ಧೆಯಲಿ ಭದ್ರೆ,
ಗಿರಿಯ ಕಂದರದಲ್ಲಿ ಸ್ವರೂಪಾನಂದದಲಿ
ಇರಿತಳಂದದಿ ಮಂದಗಮನೆ ಚೆಲ್ವಾಧರೆ!

ಶೋಭಿಸುವ ಆ ಚೈತ್ರ ಶುದ್ಧ ಪೂರ್ಣಮಿಯ ದಿನ
ಅರುಣೋದಯ ಸಮಯದಲ್ಲಿ ಸರಿಯಾಗಿ ;
ನಿಶೆ ಹರಿದು ಉಷೆಚೆಲ್ಲಿ ಎಳರವಿಯ ತಂಗದಿರು
ಭೂರಮೆಯ ಹೃತ್ಪಠದ ಕಾಂತಿಯನು ಮಿಗಿಸಿ.

ಧೀರಸತಿ ಆ ಸಮಯದಲ್ಲಿ ಮಾರುತಿಯನ್ನು
ಪ್ರಸವಿಸುತ ಭೂತಲದಲ್ಲೊಂದು ಶೋಭನೆಯ
ಬೀರುತಾ ಕೃತ ತ್ರೇತಾ ದ್ವಾಪರಕೆ ಹೆಸರಾಂತ
ಕಲಿವೀರನನ್ನಡೆದ ಪುಣ್ಯಮಣಿ ಧನ್ಯ!

ದಿನವಂದು ಶಾಂತಿಯಲಿ ನವಗ್ರಹವು ಆದರದರ
ಶಾಣದಲಿ ರಂಜಿಸಿತು ತಾರೆಗಳು ನಭದಿ,

ತರುಲತಾ ತಳಿರೆದ್ದು ಉದ್ಯಾನ ಹೂವರಳಿ
ಖಗಮೃಗವು ನಲ್ಮೆಯಿಂದೋಡಾಡಿ ಸುಖದಿ!

ಇದೊರ್ಡೀ ಪ್ರಕೃತಿಯು ಹೊಸಕಳೆಯಿಂದೀ ತೆರದಿ
ವಾನರನ ರೂಪದಲ್ಲವತರಿಸಿ ಜಗದೆ
ಮಾರುತಿಯು ಹನುಮಂತ ಘನವಂತನೆಂದೆನಿಸಿ
ದಿವ್ಯ ತೇಜಸ್ವಿ ಶರೀರದಿಂದುದಿಸೆ!

ಅಂಜನಿಯು ಸಿರಿವದನ ಸಂತಸದ ಹಿರಿಹಿಗ್ಗು
ಶ್ರೀರಾಮೋದ್ಭವಕೆ ಆ ಕೌಸಲ್ಯೆಯಂತೆ;
ಧೀರ ಸತಿಯುತ್ಸಾಹ ಜಗಕೆ ಪುತ್ರೋತ್ಸವವು,
ಕಣ್ಮನಧ ಕಾಂಕ್ಷೆ ಬಂದೊಡಮೂಡಿದಂತೆ!

---

## ೩೦ ಇಲಿ ಬೇಟೆ.

ತಿಮ್ಮ ಬೋರ ನಂಜ ಕೂಡಿ
ರಾಗಿ ಹಿಟ್ಟು ಕಲಸುವಾಗ
ಬಾಯ್ಗೆ ಬಾಯಿ ಮಾತು ಎದ್ದು
ಅವರನ್ನವರು ಮರೆತು ಕುಡಿದು
ನಂಜ ಕುಪ್ಪಿ ಎತ್ತಿದ—
ಬೋರ ಪಾಲು ಕೇಳಿದ !

ಹಿಂದಿನಿರುಳು ಬೇಟೆಯಲ್ಲಿ
ಕೊಚ್ಚಿ ಹಾರ್ದ ಮೊಲದ ಕಾಲ
ಹಿಡಿದು ತಿಮ್ಮ ಅಂತೆ ತಂದು
ಮಾಂಸ ತುಂಡು ಮಾಡಿ ಕಡೆಗೆ
ಸುಟ್ಟು ಕೂತ ಮಾಂಸವ;
ಸೇಂದಿ ಜತೆಗೆ ರಸವಲ !

ನಂಜ ಒದರಿ ಪಾಲು ಕೇಳೆ
ಹರಕು ಜೇಬು ಮೂಲೆಯಿಂದ,
ಇಲಿಯು ಒಂದು ಬೆನ್ನುಹತ್ತಿ
ಹಾಗೆ ಕೂತು ಹೆಗಲ ಮೇಲೆ
ನೋಡಿ ಆಚೆ ಈಚೆಗೆ;
ಬಿತ್ತು ಹಿಟ್ಟು ಪಾತ್ರೆಕೆ !

ರಾಗಿ ಮುದ್ದೆ ಇಲಿಯ ಗಾತ್ರ,
ಹಿಟ್ಟೊ ಇಲಿಯೊ ಎಂದು ಬೋರ
ಬೆಪ್ಪ ಹಿಡಿದು ನೋಡುತಿರಲು,
ಹಿಟ್ಟೆ ಓಡುತ್ತದೆಯೇ-ಎಂದು
ಸಿಡಿದು ಹಾರ್ದ ಇಲಿಯನು
ಓಡಿ ಕಾಡಿ ಕೊಲ್ಲಲು!

ಇಲಿಯು ಹೆಕ್ಕಿ ಮುದ್ದೆಯೊಂದ
ನಂಜನ್ ಕಾಲ ಮಧ್ಯಕ್ಕಾಗಿ
ಓಡೆ-ಅವನು ಬೋರನೆಗಲ
ಹತ್ತಿ ಕೂತು ಗಾಬ್ರಿಯಿಂದ,
ಅಯ್ಯೊ ಇಲಿಯು ಅಂದನು.
ಹಿಟ್ಟು ಹೋಯ್ತೆಂದತ್ತನು!

ತಿಮ್ಮ ಓಡಿ ಓಡಿ ಇಲಿಯ
ಬೆರಸಲಿತ್ತ ಬೋರ ಬಂದು
ಅಲ್ಲೆ ಇದ್ದ ಗುಂಡುಕಲ್ಲ
ಎತ್ತಿ ಓಡ್ದ ಇಲಿಯನಟ್ಟಿ
ಕೊಲ್ವೆನಿಲಿಯನೆನ್ನುತ
ಬಡಿವೆ ತಲೆಗೆಂದೇಳುತ!

ಇತ್ತ ಅತ್ತ ಇಲಿಯ ಸುತ್ತ
ಓಡಿ ದಣಿಯೆ ಬೋರ ತಿಮ್ಮ

ನಂಜ ಅತ್ತ ಕಾಡು ಸುತ್ತಿ
ಆಯ್ದು ತಂದು ದೊಣ್ಣೆ ಒಂದು—
ಇಲಿಯ ತಲೆಗೆ ಬಡಿಯಲು
ಮುದ್ದೆ ಸೇಡು ತೀರ್ಸಲು!

ಇಲಿಗೆ ಎಂದು ಬಡಿದ ಪೆಟ್ಟು
ಪಾತ್ರೆ ತಾಗೆ ಹಿಟ್ಟು ಚದರಿ—
ಕುಪ್ಪಿ ಚೂರು ಸಿಡಿದು ಹಾರಿ—
ಹೋಯ್ತೊ ಕಣ್ಣು—ಎಂದು ತಿಮ್ಮ
ಬೊಬ್ಬೆಹಾಕೆ ಇಲಿಯದೊ
ಬಿಲವ ಸರ್ರನ್ನೊಕ್ಕಿತೊ!

## ೩೧. ಕವಿಯ ಬಯಕೆ.

ಕವಿಯಾಗಿ ಸಲ್ಲಿಸುವ ಮಧುರಗಾನದ ಸೊಂಪು
ನುಣ್ದನಿಗಳಿಂಪಿನಿಂ ಬರಿದು ಪೊಗಳುವ ಮಾತು
ಸಾಲುಗಳ ಲೀಲೆಯಲಿ ಬರೆದ ಬಡಗಬ್ಬಿಗನ
ನಾಲ್ಪಂಕ್ತಿ ಕವನವದು ಏನು ಕಲ್ಪಿತ ವಾಣಿ!
ವೇದಗಳು ಶಾಸ್ತ್ರಗಳು ಕವಿಜಿಹ್ವೆ ಉಕ್ತಿಗಳು
ಯಾರ ಹಂಗನು ಕಾಯೆ ಹೇಳಿ ನಲಿವುವೊ ಏನೊ!
ತಮ್ಮ ಹೃದಯದ ಬಯಕೆ ಪದ್ಯ ಸಾಲ್ಗಳ ಮಾಲೆ.
ಕವಿಯು ಮರೆ ಮೋಸವನು ಎತ್ತಿ ತೋರುವ ಇಹದ
ಬಿಚ್ಚು ಮನಸಿನ ಬೇಹುಗಾರನೆಂದರೆ ಏನು?

ಅವನ ಬಯಕೆ ಅದೇನು? ಜೀವನದ ಸಮರವನು
ಸಾಮರಸ ವಾದದಲಿ ಹಾಡಿತೋರಿಸಿ ನಲಿದು
ಜನದ ಪಾಡಿಗೆ ತಾನು ಪಾಲುಗಾರನು ಆಗಿ
ಕಳ್ಳ ಜೀವದ ತಂತ್ರಗಳ ಬಯಲಿಗೆಳೆ ತಂದು
ಜ್ಞಾನಿಗಳ ನಿಷ್ಪಕ್ಷ ತಲೆಗಳನು ತೂಗಿಸುತ
ತಾನು ಹಾಡಿದ ಗಾನ ಯಾರು ಪೊಗಳುವರೆಂದು
ತನ್ನ ವಾದಕೆ ಯಾರು ಮನ್ನಣೆಯ ಸಲಿಸುವರು
ಎಂದು ನೋಡುವ ತಾನು ಬರೆದ ಹಾಡ್ಗಳನೆಲ್ಲ
ಕ್ರಮವಾಂತು ಹೇಳುವುದೆ ಅವನ ಜೀವದ ಬಯಕೆ!

ಮಧುರವಾದಾ ಕೀರ್ತಿ ಕವಿವರನೆ ಬಯಸುವನು
ತಾನು ಲೋಕಕೆ ಅಂದ ವಿಶ್ವರಹಸ್ಯದ ಸೊಲ್ಲು
ಪಾಪಿಯಾದವನೊಬ್ಬ ಹೇಳಿ ನಲಿದೊಡೆ ಕವಿಯು
ಹಿಗ್ಗುವನು, ಎಲ್ಲರಂತೆಯೆ ಪೇಳಲಿಚ್ಛಿಪನು !
ಆದಿ ಕವಿಯನು ಮೀರ್ವ ಬಯಕೆ ಅವನಲ್ಲಿಲ್ಲ !
ತನ್ನ ಒಣ ಮಾತುಗಳು ಮನ್ನಣೆಯ ದೃಷ್ಟಿಯಲಿ
ಹೊರಳಿದರೆ, ತನ್ನ ಸೇವೆಯು ರಸಿಕ ವೃಂದವದು
ಗಣಿಸಿದರೆ, ತನ್ನ ಬಿರುನುಡಿ ಜನಕೆ ನೀತಿಯನು
ಕಲಿಸಿದರೆ, ಅದೆ ಜಗದ ಕವಿ ಪ್ರಯತ್ನದ ಫಲವು.

---

# ೩೨ ಅವಳ ಬಾಳು!

ಬಯಲಲ್ಲಿ ಬಿಸಿಲಲ್ಲಿ ಆ ಬಾ–ಲೆ!
ಹಸಿಹುಲ್ಲು ಕುಯ್ದಾಡುವುದು ಕೇಳ್ದೆ!! ‖ ಪಲ್ಲ ‖

ಹಾಡೊಂದು ತನ್ನಪ್ಪ ಮರೆತ್ಹದೊ,
ಅವಳಮ್ಮ ಹರೆಯದಲಗಲ್ಹಿದೊ!
ಕಿವಿನಿಗುರಿ ಕಂಕೆರಳಿ ನಾ ಕೇಳಿ,
ಹೆಣ್ ಬಾಳಿ ಕಂಡು ಸೋಜಿಗ ತಾಳಿ! ‖ ಬಯ ‖

ತಾನೊರ್ವ ಕೊಡಗೂಸು ಎಂದ್ಹಳು,
ಪುಡಿಕಾಸು ಬಿಸುಡೋದ ತೆಗೆದ್ಹಳು!
ಸೆರಗು ಮೂಲೆಯಲಿಟ್ಟು ಬಿಗಿದಾಗ,
ಕಣ್ಣೀರ ಬಿಸಿಯೆನ್ನ ತಾಗ್ಹಿತೊ! ‖ ಬಯ ‖

ತನ್ನಣ್ಣ ಚಿಕ್ದಾಗೆ ಸತ್ಹೋದ,
ಮೂಂಮಂದಿರಾರಿಲ್ಲ ಒಣಜೀವ!
ಸತಿಯೊಗೆ ಗತಿಯಿಲ್ಲ–ಈ ಹುಲ್ಲು,
ಹುಲ್ನೆಲ ಅವಳೊಂದು ಒಸಿಪಾಲು! ‖ ಬಯ ‖

ಹುಲ್ಲಿರಿವ ಕತ್ತಿಯು ಕೊರಳ್ಹಗೆ,
ತಾನಾಗೆ ಮಡುಗ್ಹಳು ಸಾಯೋಗೆ;

ತನತನಗೆ ತಾಳ್ವ ಬುದ್ಧಿಯೋ
ಕಾಲವೂನವ ನೂಕೆ ಧೈರ್ಯವೊ! || ಬಯ ||

ಹೂಜೀವ ಸೊಗಸೆಂದು ಹಾಡೋಳು,
ಬೆಂದ ಬಾಳಿನ ತಾಪ ನೆನೆಯೊಳು;
ಕಣ್ಣೀರುಮಯಲೋಕ–ಅನ್ನೋಳು,
ತನ್ನ ಬಾಳಿನ ಮರುಕ ಮರೆಯೋಳು! || ಬಯ ||

ಬಯಲ ಬಾನ್ ಸುತ್ತೆಲ್ಲ ಮೌನವೊ,
ಈ ಹುಡುಗಿಯ ಹಾಡಿನ ಮೇಳವೊ;
ಮಲೆನಾಡ ವಂಶದ ಸವಿಜೀವ,
ತಬ್ಬಲಿಯಾದ ಈ ಹೂಬಾಳ! || ಬಯ ||

ಕೆಂಬಕ್ಕಿ ಬಯಲಾಗೆ ಹಾರ್ವಾಗ
ಕೊರಳೆತ್ತಿ ಆ ಬಾಲೆ ದಿಟ್ಟಿಸಿ;
ತನ್ ತಾಯಿ ಸಾಕಿದ್ದ ಮರಿಕೋಳಿ,
ನೆನೆಯೋಳು ತನ್ನೊಂದು ಮರಿಬೆಕ್ಕ! || ಬಯ ||

ಹಾಡಲ್ಲೆ ಹನಿಯಾಗಿ ಜಿನುಗೋಳು!
ತನ್ನೆಸರು ಭೂರಮೆ–ಅನ್ನೋಳು!
ಗತಿ ತೋರದಲ್ಲಿಯೆ ಒರಗೋಳು,
ಏನಿದೀ ತರವಿದೊ ಜನಬಾಳು! || ಬಯ ||

---

# ೩೩ ಕೃಷ್ಣಾಕುಮಾರಿಯ ಆತ್ಮಹತ್ಯೆ.

(ಸೂ:—ಜೋದಪುರ ಮತ್ತು ಜಯಪುರ ರಾಜವಂಶಗಳು ಕೃಷ್ಣಾಕುಮಾರಿಯ ಪಾಣಿ ಗ್ರಹಣ ನಿಮಿತ್ತ ಹೊಡೆದಾಡುವುದು. ಅವಳ ತಂದೆ, ಭೀಮಸಿಂಹನ ದೆಸೆಯಿಂದ ಕೃಷ್ಣಾಕುಮಾರಿಯು ಆತ್ಮಹತ್ಯ ಮಾಡಿಕೊಳ್ಳಬೇಕಾಗುವುದು.)

ಪೇರಾನೆಗಳೆರಡರ ಕಡು ಕಲಹಕೆ ಮರಿಮಿಗವೆ?
ರಣಹದ್ದುಗಳೊಡೆದಾಟಕೆ ಶುಕಶಿಶುವಿನ ಬಲಿಯೆ?
ಎಳೆಕುವರಿಯು ಎಳೆ ಹರೆಯವು ತಂದೆ ತಾಯಿಗಳವಳ
ನಡುಕೆರೆಯಿಂ ಬರಲಾರದೆ ಬಿಟ್ಟಂತೆಯೆ:—ಅಲ್ಲಾ?
ಸುಖಪೋಗಿನಯೆಡೆಗಿಂತೀ ಬಾಧಕವದು ಆಗೆ
ಚೆಲು ಬಾನನು ಕಾರ್ಮೋಡವದಾವರಿಸಿದ ತೆರನೆ. ॥ ೧ ॥

ಸಾರಸ್ವತ ಸಮತೆಯು ಈ ಜನತೆಯು ಎಡೆಯೆಲ್ಲಿ?
ಸಹಕಾರದ ಒಲದ್ಮೊಲೆಯು ಕಟುಹೃದಯದೊಳೆಲ್ಲಿ?
ಶ್ರುತಿಶಾಸ್ತ್ರವು ಆಗಮಂಗಳು ನಡೆವುದೆ ಇದರೆಡೆಗೆ—
ಆಕೊ ನೋಡೆ, ಘಾತುಕತನ ಬೀಡೊಳು ಸುಖವುಂಟೆ?
ವಿಧಿಪೊರೆದೊಡೆ ಬಾಳ್ಸವಿಯುದು! ಬಾನ್ಮಂಡಲದಲ್ಲಿ
ಹಾರಾಡುವ ಖಗರಾಶಿಗೆ ಕಂಠಕತನವೆಲ್ಲಿ? ॥ ೨ ॥

'ಎಲೆ ರಮಣಿಯೆ, ಏನಿಂತಿದು? ಹೇ ಕುವರಿಯೆ ಕೇಳು-
ವಿಷಪಾನವೆ ಈ ಜನ್ಮಕೆ! ಇಂತಿರ್ಪುದೆ ಬಾಳು!!
ನೆಲೆಯಿಲ್ಲವೆ ನಿಯಮಿಲ್ಲವೆ; ನೀತಿಯು ಮೋಹಾಂಧ
ಯಶಃಕಂಠಕರಾಗಿ ಎಸಗಿದ ಕಲಹವೆನಿತೊಂದಂಗ!
ಹಾ ಕುವರಿಯೆ! ಕರುಳೆನ್ನಯ ಪಿತನಿನ್ನಯ ಎಂತು,
ತಡೆವುದೊ ಇದ! ಎಂತಿರ್ಪುದೊ ನಿಯತಿಯು ಈ ತಂತು ॥ ೩ ॥

ಇಂತೆನ್ನಲು ಥಟ್ಟನೆಮನ ನೆಟ್ಟನೆ ತನುವಿರಿಸಿ
ಅರಳಿದ ನಸುನಗೆಯನು ಬಾಲೆಯು ಅಲ್ಲಿ ಸಲಿಸಿ.

ಇಬ್ಬನಿಯಿಂ ಸುಮವರಳುತ ನಸುಚೆಲ್ವನು ಬೀರಿ
ತೋಷವನೆಮಗೀವಂತೆಯೆ ಕೃಷ್ಣಳ ಮುಖ ಬೀರಿ
ಬೇಸರದಾ ಕಡು ಬೇಗೆಯೊಳಿರಿತಾ ಸ್ತ್ರೀವೃಂದ—
ವನು ತಣಿಸುತ ರಾಜಸ್ಥಾನಕೆ ಮುದತೋರಿದಳಂದ! || ೪ ||

'ಹೇ ತಾಯೇ, ಎನ್ಜನನಿಯೆ ಭಾಗ್ಯದ ವರಮಾತೆ,
ಶೋಕಿಪೆಯು? ಇದರೊಳು ಏನೀಪರಿಯೂ ಕೊರತೆ?
ಮೋಹಾಂಧದ ಬೀಡೊಳು ಚಲಿಸಲು ಬಿಡುವೆಲ್ಲಿ?
ಮಾತ್ಸರ್ಯದ ಗನಿಯಿಂ ಪೊರಮಡುವಾ ತೆರವೆಲ್ಲಿ
ಅನಿವಾರ್ಯವಾದೀ ಪರಿ ಕಾಟವ ಬಿಡಲೆಸಗೆ—
ವಿಷಸೇವಿಪೆ–ಚಿರಶಾಂತಿಯು ಲೋಕದಿ ನಾನೊರಗೆ. || ೫ ||

'ವಂದಿಪೆ ನಾಂ ಈಶನಿಗೂ ಮಾತಾಪಿತರರಿಗೂ!
ವಂದಿಪೆನಿನ್ನೊಮ್ಮೆಯು ನಾ ಸಖಲಾಪ್ತ ಜನಕೂ!!
ಪೋಷಿಸುತಾ ಪಾಲಿಸುತಾ ತಿನ್ನಿಸುತಾ ಎನ್ನ,
ನೋಡಿದಕೂ ಆದರ್ಶದ ಪ್ರೀತಿಯು ಬಿಡದನ್ನ.
ಇಂದಿನ ದಿನ ಈ ನಿಮಿಷಕೆ ತನುವಿದನೆನಗಿತ್ತ
ಹಿರಿಯರನಾ ವಂದಿಪೆನೋ ಇನ್ ತೆರಳುವೆನತ್ತ!! || ೬ ||

'ಸೇವಿಪೆನೀ ಪಾನಕವನು ದೇಶದ ಸುಖಕಾಗಿ—
ಸೇವಿಪೆನೋ ಎನ್ನಡೆದಾ ಜನಕನ ಸುಖಕಾಗಿ—
ಸೇವಿಪೆನಾ ಅಳಿಮನದಾ ದುರ್ಜನರೆದೆಗಾಗಿ—
ಸೇವಿಪೆನೆಂದಳು ಶಾಂತಿಯು ತಾಣದ ವಶಕಾಗಿ—
ಎನ್ನುತ ತಾಯ್ ತಂದೆಗೆ ಪ್ರದಕ್ಷಿಣೆಯನು ಮಾಡಿ
ವಂದಿಸಿ ಬಳಿಸೇರಿದ ಜನಸ್ತೋಮಕೆ ಸುತೆನೋಡಿ! || ೭ ||

ಕುಡಿದಳು ಹಾ! ಸಾಯ್ವಳೆ ವಿಷ ಸೇವಿಸೆ ಆ ಬಾಲೆ?
ಭೋದಿಪ ತನ್ ತಾಯಿಗೆ ಹಿತವಾಕ್ಯವನಂತುಸುರೆ!

ಋಣಿಯಾದೆನು ಹೇ ಪಿತನೇ, ಸಾಕಿದೆ ನೀ ವರೆಗೆ
ಮೀಸಲು ಈ ಮರಣದ ಪರಿ! ತಿಳಿದೂ ಹಾ ಕೊರಗೆ?
ಈ ವಿಶ್ವದ ಯಾವೆಡೆಯೊ ನಮ್ಮೆಲ್ಲರ ಸ್ಥಾನ
ನಾವ್ ಕೊರಗುತ ಮತಿಹೀನರಂತಾಗ್ವುದೆ ದುಮ್ಮಾನ! ॥ ೮ ॥

ಎನ್ನಲು, ಅದೊ ಬಂದಿತು ಗರಳವ ತುಂಬಿಸಿ ಕುಡಿಯೆ,
ಕೊಟ್ಟರು ನೋಡಲ್ಲಿಯೆ ಕೆಡಹಲು ತರುಣಿಯು—ವಿಧಿಯೆ!
ಮುಖಕಾಂತಿಯು ತನುಶೋಭೆಯು ಹೃತ್ಪರದಾ ಸ್ಥೈರ್ಯ
ಉತ್ಸಾಹವು—ಬೆಡಗೆನಿಸಿತು ಜನವೃಂದಕೆ ಸುತೆಯೂ!
ಕುಡಿದಳು ನೋಡೊಮ್ಮೆಗೆ ಜುಮ್ಮೆನ್ನಿಸುತ ಕ್ಷಣದಿ
ಸಖಲರ ಹಾಹಾಕಾರವು ಕೇಳಿಸಿದವು ನಿಜದಿ. ॥ ೯ ॥

ತರುಲತೆಗಳು ಅಲ್ಲಾಡಿತೆ ಉದ್ಯಾನದಿ ಅಂದು?
ಖಗಮಿಗಗಳು ಕುಣಿದಾಡಿತೆ ಸಂತಸದಲಿ ತಿಂದು?
ಜ್ವಲಿಸಿತೆ ರವಿ ಕಿರಣವು ಸಹ—ಕಳೆಗೆಟ್ಟಾ ದಿನವು;
ಪಡುವಣ ತನಿಮಾರುತವದು ಸೋಕಿತೆ ನೋಡಿದುವೂ?
ದಿವಸದ ಗತಿಗಳನರಿಯದೆ ಸೋಜಿಗವದು ಎಲ್ಲ;
ದುಃಖಾಂಬುಧಿಯೊಳು ಈಜುತ ಕಳೆದರು ದಿನವೆಲ್ಲಾ! ॥ ೧೦ ॥

ಉತ್ಪಾತವಿದಿಂತಾದರು ಉತ್ತೇಜಿತ ಕಾರ್ಯ
ಕೊನೆಗೊಂಡಿತೆ? ಕೃಷ್ಣಳು ಅದೊ—ನೆಟ್ಟನೆ ಇರೆ—ಶೌರ್ಯ!
ಕ್ಷುದ್ರಾತ್ಮರಲ್ಲಿಂದಲೆ ಆಗಲರು ನೋಡಂತೂ,
ಕುಸುಂಬ’ದಾ ಮೂಲಿಕೆರಸ ಸೇವಿಸೆ ಕೊಡಲನಿತು!
ಒಂದನೆಯೇ ಎರಡನೆಯೇ ಮಗುದೊಮ್ಮೆಗೆ ಎಂದೇ
ನೋಡಲು ಕಡು ಸಾಹಸದಿ ಮಾಡಿತ್ತರು ವಧೆಗೆಂದೆ. ॥ ೧೧ ॥

ಸೆರಗೊಡ್ಡುತ ಕಾಲೂರುತ ನೆಲಕುರುಳುತ ತಾಯಿ,
ಬೇಡಿದರೂ ಬೇಡೆಂದರು ಕಡೆಗಾಲವು ಸ್ಥಾಯಿ!

ಕಲ್ಮನವದು ಕರಗುವುದೆ? ಕುಮಾರಿಯು ಮನದಿ
ದೆಸೆಹತ್ತಕೆ, ದೇವತೆ, ಜನಸ್ತೋಮಕೆ ಒಂದಾಗಿ
ವಂದಿಸುತಾ, ಮಾತೆಯ ಆರೋದನವ ತಣಿಸಿ
ವಿನಯದಿ ತಲೆಬಾಗಿಸಿ ಕುಡಿದಳು ವಿಷವನು ಮುದದಿ! || ೧೨ ||

ಕಣ್ಮುಚ್ಚಿತು, ಅಸುರರ ನಡುವಿರ್ದೀ ಸುಕುಮಾರಿ
ಆಗೊ ಹೋಯಿತು! ನಾಡಗಲುತ ಸ್ತ್ರೀಮಣಿ ಎಳನಾರಿ!!
ಘೋರಾಂಧತೆ ರಾಜಸ್ಥಾನಕೆ!–ಕವಿಯಿತು ನಿಸ್ತೇಜ,
ರತ್ನವದಾ ಮಣ್ಣೊಕ್ಕಿತು–ನೆಲೆಸಲು ಸರಿ ಸಹಜ!
ಕಾಮಾದಿಗಳೀಜಗವನು ಸುಡುವುದು ನೋಡಿನಿತು,
ಏನ್ ಪೊಂದಿದರೀ ಕಾರ್ಯದೆ ಮೇಲಾಡುತಲಿಂತು? || ೧೩ ||

ತಾ ಸಾಯೆ ಜನಕೋಟಿಗೆ ಚಿರಸುಖವಿದೆಯೆನಿಸಿ
ಆನಂದದಿ ಪ್ರಫುಲ್ಲಿತ ವದನದಿ ವಿಷಹೀರಿ;
ನೆನೆದಳು ಸುತೆಕೃಷ್ಣಳು ಆ ನಾರೀ ಮಣಿಗಳನು,
ನೆನೆದಳು ರಾಜಸ್ಥಾನಕೆ ಯಶಃಕಾಯರಾದರನೂ;
ಪದ್ಮಿನಿಯೂ ಸಂಜೋಗಿನಿ ಪನ್ನೆಯು ಮೊದಲಾದ
ಕರ್ಮದೇವಿ ತ್ಯಾಗಿ ಜನನಿಗಳಾನಂದದಿ ನೋಡ. || ೧೪ ||

ಕಳೆಯಿತು ದಿನ ಕಳೆದಂತೆಯೆ ನೆನಪೊಂದನು ಉಳಿಸಿ
ಆ ಬಾಲೆಯ ದಿವ್ಯಾತ್ಮವ ಸ್ವರ್ಗಲೋಕದಲುಳಿಸಿ,
ಜೀವವನಾ ತ್ಯಾಗದ ಆ ಸ್ಫಟಿಕದ ಎಡೆ ತೋರಿ,
ಸುಖಸಂಪದ ಇಹಜೀವನ ಬಯಕೆಯ ನೆಲೆ ಮೀರಿ;
ನಡೆದಳು ಆ ಸ್ಥಾನದೆ ಬಹು ಧವಳ ಪ್ರಭೆಯಾಗಿ,
ಮಿನುಗುತ ಪ್ರಕಾಶಿಸಿ ಮನಮೋಹಿಸಿ ಮಂಗಳಾಂಗಿ. || ೧೫ ||

---

## ೩೪ ಓಂ—

ವೇದಭೂಮಿಯೊಳಿಹ ಕಡುಸಾಹಸದ ನೆಲೆಗೆ ಮಿ
ತಿಯಿಲ್ಲ, ಕೊನೆಯಿಲ್ಲ; ಪುರುಷ ಸ್ತ್ರೀಯರುಮೆಂದು
ನೀತಿಯಲಿ ಧೈರ್ಯದಲಿ ಛಲದಲ್ಲಿ ಧರ್ಮ ಭೂ
ಮಿದುರೊಳೀ ಭೇದವಿಹುದಿಲ್ಲ; ವಿಶ್ವವಿದನಂ
ತ; ಅನಾದಿಕಾಲದಿಂ ಈ ಕ್ಷೇತ್ರ ಶೌರ್ಯ ಸ–
ದನವದು; ಕಡು ಹೇಡಿಗಳಾ ಬೀಡು ತಾನಲ್ಲ!

ಮೊರೆಯಿಟ್ಟು ಮತಿಗೆಟ್ಟು ಛಲಸಿದ್ಧಿ ದುರ್ಬುದ್ಧಿ
ಯಿಂದ ಈ ಜಗರಂಗದೆಡೆ ಪರಪೆಯೊಳು ನಿಂತು
ಶತವರ್ಷ ದುರ್ನಟನಾ ದೃಶ್ಯವನು ತೋರಿದೊ–
ಡಿನ್ನೆಲ್ಲಿ ಶೋಭನವು? ಭರತ ಶಾಸ್ತ್ರವು ಅಖಿಲ
ಶಸ್ತ್ರ ಸಾಮ್ರಾಜ್ಯಕನ್ವಯಿಸಿ ಕ್ಷಾತ್ರದೀವಿ
ಗೆಯನ್ನು ಕಡೆತನಕ ಬೆಳಗಿಪುದು! ಕಾಣಿಪುದು!!

ವೇದಗಳು ಹಾಡುವುವು ತೃಣಕಾಷ್ಠದಿಹ ಪೌ–
ರುಷವ; ಶ್ರುತಿಗಳಿಹ ಝೇಂಕಾರವಾಚಾರ
ಸಂಪನ್ನವದು; ಸಹಸ್ರಾರು ಶ್ಲೋಕಗಳು ಘರ್ಜಿ
ಪುವು ಹಾಡುಗಳ ಶೂರತನ ಧೀರತನ! ಗಂಡು
ಸರ ಹೆಂಗುಸರ ಕಂಠಗಳು ಶೋಭನವು ಸ್ತುತ್ಯ
ಗಾನಗಳ ಹಾರದಲಿ; ಕಾಣಿಕೆಯ ಧಾರದಲಿ.

ಒಮ್ಮರದೊಳಸುರಾಗಿ ಒಂದರಲಿ ಕೆಂಪಾಗಿ
ಒಂದರಲಿ ಬಿಳಿದಾಗಿ ಪುಷ್ಪಗಳ ನಸುನಗೆಯು.
ಒಂದರಸಿ ಕರ್ಮುಡಿಯೊಳಿನ್ನೊಂದು ತಿಪ್ಪೆಯಲಿ
ಕೂಡಿಹುದು ; ಜನವೊಂದೆ, ಭಾಳದಕ್ಕರ ರೀತಿ
ಒರಟಾಗಿ ನಯವಾಗಿ ಕೆತ್ತಿಹುದು ಡೊಂಕಾಗಿ-
ಅಂತಂತೆ ಕುಣಿಯಿಪುವು ಬಾಳುವೆಯಲೀ ಜನವ –

ಇತಿಹಾಸವೆಂಬೊಂದು ಪುಣ್ಯಯಾತ್ರೆಯ ಹಾದಿ;
ವೇದಭೂಮಿಯೊಳಿಹ ವಿಶಾಲತೆಯನು ನೋಡಿ ನ
ಡೆವ ಮಾರ್ಗ ತಾನಲ್ಲ, ಮಾನಸಿಕ ನಡೆಯುವಿಕೆ,
ನೋಡುವಿಕೆ, ವೈಭವ ವೈಚಿತ್ರ್ಯಗಳ ತಿಳಿಯುವಿಕೆ ;
ಗತಕಾಲ ಜೀವಿತದ ಛಾಯೆಯನುಭವ ರೂಪ ! –
ಸಮರಗಳ ಸಾಹಸದ ರಾಜ್ಯಗಳ ವ್ಯಾಜ್ಯಗಳ !!

ಸಿರಿಯಡುವೆ ಧನಿಗಿಹದಿ ಕಲ್ಲೆಡೆಯೊಳಿಹ ಹೊನ್ನು;
ಕಾರ್ಯಸಫಲತೆಯದುವೆ ಸರ್ವವನು ತೊರೆದ ಹಿ –
ತೈಷಿಯ ಧನವು ; ಧಾರಿಣಿಯ ಭಿಕ್ಷುಕಗೆ ದಿನಕೆ
ಪೈಯೊಂದೆ ಸಂಪತ್ತು ; ದಿನದಿನವು ಹೊರೆದುಂಬ
ಜನಕಿಹದೆ ಹಿಡಿಯನ್ನ ಸಿರಿಯಂತೆ-ಕವಿಗಹುದ
ಪರಂಜಿಯದು ಕಲ್ಲೆದೆಯ ತೊಯಿಪ ವಿಚಾರಗಳು.

ಮೂಮರವನೇರೇರಿ ಮಧುಮಾವನೊಂದು ಕೆಳ
ತಪ್ಪಂತೆ; ಹಿಮಗಿರಿಯೊಳೆಲ್ಲೆಡೆಯು ನೋಡ್ಯೊಂದು

ವರ ಮೂಲಿಕೆಯನೆಳೆತರುವಂತೆ; ಇತಿಹಾಸಗ
ಳಗಾಧ ಪಂಕ್ತಿಗಳೆಡೆಯಿಂದ ಸುಭೋಧನೆಯ
ಕಥೆಯೊಂದನೆಳೆತಂದು ಬಣ್ಣವನು ಹರಿಯಿಸಿದೆ.
ಶಬ್ಧಗಳ ಚೆಲ್ಲಾಡಿ ರಸವನೊಸರಿಸಿದೆನಿದಕೆ!

ಕತ್ತಲೆಯ ಕಾಲದಲಿ ಜನರ ಕೆಯ್ಗೈಮೆಗಳು
ಕಟ್ಟುಗ್ರದಿಂದೆಸೆದು ಕಟ್ಟಾಳ ಬಾಳಲ್ಲವೊ?
ಇಂದಿಂದಿಗಾರಾರೊ ಎಂತೆಂತೊ ತಿಳುಹುತಾ
ಊಹನೆಯ ಸಾಧನೆಯಿಂದೆಮ್ಮಲ್ಲೆ ಕತ್ತಲೆಯು!
ನೋಡುವೆವು ಬೆಳಕೆಂದು ದಿಟ್ಟಯಿಂದೊಯ್ಯುವುದು
ಶತಮಾನ ಕೆಲವಕ್ಕೆ! ಪಿಂಪ್ರಭೆಯದೆಂತಿರ್ದಿತೊ?

ರಾಜ್ಯವನು ಕಟ್ಟಿದರು ನಿಮಿಷದಲಿ ಚೂರಾಗಿ
ಕಾಡಿದರು ಬೇಡಿದರು; ಪೌರುಷದಿ ಮಡಿದನಿತು
ಮತಗಳನು ಜನಪ್ರೀತಿ ಜನಸೇವೆಯಿಂದಲು
ಹೊರಡಿಸುತ, ಪಲಕಾಲಕಂತದುವೆ ಬೀಳುತಾ
ಪರದೇಶದಿಂ ಸಹಸ್ರಸಾರಿ ಸಾಲಾಗಿ ಜನ
ಕೂಡಿದರು ಬೀಡಿದಕೆ; ರುದ್ರಭೂಬಯಲಾಗಿ!!

ಹಿಂದಿನದು ಇಂದಕ್ಕೆ, ಇಂದಿನದು ಮುಂದಕ್ಕೆ
ಅಂದಿನದು ವಿಚಿತ್ರ ಇಂದಿನದು ಕುತಂತ್ರ–
ಮಾನವನೆ ಬಲುಮೋಹಿ ಹಿಂದಿನಿಂದಿನದೆಂದು!
ಹೈಂದವ ಮಹಸಾಮ್ರಾಜ್ಯ ಕೀರ್ತಿತೊಟ್ಟಿಲೊಳು

ಪೂರ್ವಾಪರಕಕ್ಷಿತ್ರ ವಿಲಾಸದ ತೂಗಿನಲಿ
ವೈವರಿದು ಕಳೆಗುಂದಿ ಮೊನ್ನೆದಂ ನೆನೆಸುತಿದೆ!

ಆರ್ಯ ನೇತ್ರರ ದವನಿಶಿ ಪಾವನವು ಸ್ಫೂರ್ತಿಮಯ!
ಹೊಸವರ್ಷ ಮಳೆಜೋರು, ಮಣ್ಣುಕ್ಕಿ ನೆರೆಯಿಂದ
ವೆಂಬಂತೆ ಹೊಸಮಕುಟ ಹೊಸರೀತಿ ಶಾಸನವು
ವಿಧವಿಧದೆ ವಾಣಿಜ್ಯ ಮೊರುತದ ತೆರೆಯಂತೆ
ಏಳುವುದು ಬೀಳುವುದು; ಪೊಂದುತಲಿ ಕಷ್ಟವನು
ದುಃಖವನು, ಜನಗಣವು ದೇಶವೇ ಕೋಟ್ಯಾದ!

ಹೆಣ್ಣೊಂದು ಹೊನ್ನೊಂದು ಮಣ್ಣೊಂದು ಎಂಬಂತೆ
ಮಾನವನ ಹೃದಯ ಮೂಲವಂ ಕೊರೆಯುವುದು
ಋಷಿವರ್ಯ ಪಂಡಿತರು ಜ್ಞಾನಿಗಳುಮೆಲ್ಲ ಸಾ
ಲಾಗಿ ಎದೆದುಂಬಿ ಸಂತೈಸಿಹರತ್ಯಾಶೆ ಮೂಲ
ವಂ ಕಿತ್ತೊಗೆಯಲು! ಮಳೆಯನಿಳೆಯಿಂ ತಡೆದು ನಿಲಿ–
ಸಲಂಭುಧಿಯ ಜಲಿವಾರಿಸೆ ತೊಡಗಿ ಸಾಧಿಪರೆ?

ಜಡಿಮಳೆಯು ಜರಜರನೆ ದಿನಹಲವು ಹೊಡೆಯಲಿ
ಒಣಗಿಸದೆ ತಂಭೂಮಿಯನು ದಿನಕೆ ರವಿಬಂದು?
ಚೆಂಜೇನ ಕೂಡಿಸಲಿ ತಾಸುಮಾಸಗಳೆಲ್ಲ
ನಿಮಿಷೊಂದೆ ನಿರ್ಘೃಣನ ಕೈಹಿಡಿತವಾಗದೇ?
ಕ್ರಿಮಿಯೆಂಬ ದಯವುಂಟೆ? ಜನವೆಂಬ ಮತಿಯುಂಟೆ?
ಧರ್ಮದಾಸ್ಥಾನಕೆ ಬಹುಮಾನದೊಂದಿರವುಂಟೆ?

ಆರ್ಯ ಮೂರ್ತಿಗಳದೃಶ್ಯ ಜಗವೀರ ಸಿಕಂದ
ರನಾಗಮನ; ಸನಾತನ ಧರ್ಮದಲಶ್ರದ್ಧೆ ಆ
ವಿಶ್ವಗುರು ಗೌತಮನ ಮೂರ್ತಿಯೂ, ಅನಾಯಕ
ತೆ ಬೇರೂರಿ ರಾಜ್ಯದಲ್ಲೋಲಕತೆ ಅಡಗಿಸಿದ
ಪಾವನ ಪರಮೂರ್ತಿ ಪ್ರಿಯದರ್ಶಿ; ಗಣ್ಯ ಮೂ
ರ್ತಿಗಳಂತು ಭಾರತವು ಸ್ತುತ್ಯವಿಂದಂತೂ.

ಪುಷ್ಯಮಿತ್ರ ಗುಪ್ತಾದಿ ಮಿತ್ರರೂ, ಹರ್ಷಕ್ಕ
ರಾದಿ ಸುಚರಿತ್ರರೂ, ಪ್ರತಾಪ ಶಿವಜಿ ಪ್ರ
ತಾಪರೂ, ಮೇಲ್ಮೇಲೆ ನೆನಹು ಭಿತ್ತಿಯನುತ
ಟ್ಟುವರು, ಭಾರತವು ಧನ್ಯಸಲೆ! ಅನ್ನೆಯದ ಪ್ರ
ತಿರೂಪ ನೀಲಾಂಬುಧಿ ಮಧ್ಯವಿಹ ನಕ್ರತಿವಿಂ
ಗಿಲದಂತೆ ಅಲ್ಲಲ್ಲಿ ಶೋಭನೆಯು ತಡೆಯದೆ?

ಯಾರಾರು ಎಂತೆಂತು ಬಾಳಿಲ್ಲ ಬದುಕಿಲ್ಲ?
ಕವಿತಾನು ಹಾಡಾಡಿ ಕೊಚ್ಚೆನೀರನು ಬೊಗಸೆ
ಯೊಳುವಿಟ್ಟು ತೀರ್ಥವಿದಪ್ಪಯ್ಯ ಎಂದಂದು ನೀ
ಡಿತಾ ಮರಳುಗೊಳಿಸುವುದೆ? ನಾತಿಂದ ಬೇವಿನೆ
ಲೆಯಂ ತುತಿಸಿ ಪೊಗಳಿದರೇಂ ಗ್ರಹಿಪರೆಂದು ನಾ
ನೋಡುವೆನೆ? ಬಾಯ್ದಣಿಯ ಇನಿದೆಂದು ಪಾಡುವೆನು!

---

